KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಫೆಬ್ರವರಿ ೨೬, ೨೦೦೯ (ಫಾಲ್ಗುಣ ೭, ಶಕ ವರ್ಷ ೧೯೩೦) | ಸಂಚಿಕೆ ೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಜವಹರ ಬಾಲಭವನ ಅಮ್ಯೂಸ್ಮೆಂಟ್ ಪಾರ್ಕಿನ ಆವರಣದಲ್ಲಿ ಟೋರಾ ಟೋರಾ ದುರಂತದ ಬಗ್ಗೆ – ಶ್ರೀಮತಿ ದಿವ್ಯಾನಾರಾಯಣಪ್ಪ, ಆಡಳಿತಾಧಿಕಾರಿ, ಇವರನ್ನು ಅಮಾನತ್ತಿನಲ್ಲಿ ಇರಿಸುವ ಬಗ್ಗೆ.

**ಪ್ರಸ್ತಾವನೆ :**

ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಚಿವರು ಕೆಲ ದಿನಗಳ ಹಿಂದೆ ಬಾಲಭವನಕ್ಕೆ ಭೇಟಿ ನೀಡಿದಾಗ ಬಾಲಭವನದಲ್ಲಿನ ಅವ್ಯವಸ್ಥೆ ಅವರ ಗಮನಕ್ಕೆ ಬಂದಿದ್ದು, ಬಾಲಭವನದ ಅಮ್ಯೂಸ್‌ಮೆಂಟ್ ಬಗ್ಗೆ ಉಚ್ಚ ನ್ಯಾಯಾಲಯದಲ್ಲಿ ಅಫಿಡೆವಿಟ್ ಸಲ್ಲಿಸಲಾಗಿದ್ದು, ಈ ಅಫಿಡವಿಟ್ ಅನ್ವಯ ಕೇವಲ 3 ಮನೋರಂಜನಾ ಆಟಿಕೆಗಳನ್ನು ಉಳಿಸಿ ಉಳಿದ 9 ಆಟಿಕೆಗಳನ್ನು ತಕ್ಷಣ ನಿಲ್ಲಿಸುವಂತೆ ಆದೇಶವಿದ್ದು, ಹಾಗೂ ಮಾಲಿನ್ಯ ನಿಯಂತ್ರಣಾ ಮಂಡಳಿಯ ವರದಿಯಂತೆ ಟೋರಾ ಟೋರಾ ಅಮ್ಯೂಸ್‌ಮೆಂಟ್‌ನಿಂದ ಮಾಲಿನ್ಯ ಹೆಚ್ಚುತ್ತಿದ್ದು ತಕ್ಷಣ ಈ ಮನೋರಂಜನಾ ಆಟಿಕೆಯ ಚಾಲನೆ ನಿಲ್ಲಿಸಬೇಕೆಂದು ಆದೇಶ ಹೊರಡಿಸಲಾಗಿದ್ದರೂ ಸಹ ಸಂಬಂಧಪಟ್ಟ ಅಧಿಕಾರಿಗಳು ಕ್ರಮ ಕೈಗೊಳ್ಳದೆ ಕರ್ತವ್ಯಲೋಪ ಎಸಗಿ ದಿ: 30–6–2008 ರಂದು ಜವಹರ ಬಾಲಭವನದಲ್ಲಿ ಶ್ರೀಮತಿ ಆಯೇಷಾ–27 ವರ್ಷ, ಇವರು ತಮ್ಮ ಮಗುವಿನೊಂದಿಗೆ ಟೋರಾ ಟೋರಾ ಅಮ್ಯೂಸ್‌ಮೆಂಟ್‌ನಲ್ಲಿ ಚಲಿಸುತ್ತಿದ್ದಾಗ ಶ್ರೀಮತಿ ಆಯೇಷಾರವರು ಅದರಿಂದ ಬಿದ್ದು ಮೃತಪಟ್ಟಿರುತ್ತಾರೆ. ಅಮ್ಯೂಸ್‌ಮೆಂಟ್ ಪಾರ್ಕಿನಲ್ಲಿ ನಡೆದ ದುರಂತಕ್ಕೆ ಬಾಲಭವನದ ಅಧಿಕಾರಿಗಳ ನಿರ್ಲಕ್ಷವೇ ಕಾರಣವೆಂದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಬಾಲಭವನದ ಆಡಳಿತಾಧಿಕಾರಿ, ಶ್ರೀಮತಿ ದಿವ್ಯಾನಾರಾಯಣಪ್ಪ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದನ್ನು ಬಾಕಿಯಿಟ್ಟು ಸದರಿ ಅಧಿಕಾರಿಯನ್ನು ಕೂಡಲೇ ಅಮಾನತ್ತಿನಲ್ಲಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 318 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 1ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ದಿವ್ಯಾನಾರಾಯಣಪ್ಪ, ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ

(ಸಿಸಿಎ) ನಿಯಮಾವಳಿಗಳು 1957ರ ನಿಯಮ 10(1)(ಡಿ) ಮೇರೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನಲ್ಲಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1013

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಆಯವ್ಯಯದಲ್ಲಿ ಸೇರ್ಪಡೆಗೊಂಡಿರುವ ಮಂಡ್ಯ ಜಿಲ್ಲೆಯ, ಮಂಡ್ಯ ತಾಲ್ಲೋಕು ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ ಮುಇಂ/ಸಂಕದ/ರಶಾ/ಸಇಂ3/2008–09, ದಿನಾಂಕ 15–12–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ಈ ಕೆಳಕಂಡ 6 ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ. ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಶಿವಳ್ಳಿಯಿಂದ ಎಂಎನ್ ರಸ್ತೆಯ ಸ: 22.00 ರಿಂದ ಗುನ್ನಾಯ್ಯನಹಳ್ಳಿ ಸೇರುವ ರಸ್ತೆಯ ಸ: 0.00 ರಿಂದ 5.50 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 |
| 2 | ಬಿ.ಹಟ್ನದಿಂದ ಎಂ ಹೊಸಹಳ್ಳಿ–ಚೋಕನಹಳ್ಳಿ–ಉಪ್ಪರಕನಹಳ್ಳಿ ಮಾರ್ಗವಾಗಿ ಸೇರುವ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 |
| 3 | ಬಿಬಿ ಬಿಟಿ ರಸ್ತೆಯಿಂದ ಯಲಿಯೂರು ಎಲೆಚಾಕನಹಳ್ಳಿ ಮುಖಾಂತರ ಬಿಎನ್ ರಸ್ತೆಯಿಂದ ಹೊಳಲು ರಸ್ತೆಯ ಸೇರುವ ರಸ್ತೆಯ ಆಯ ಭಾಗಗಳಲ್ಲಿ ಅಭಿವೃದ್ಧಿ | 50.00 |
| 4 | ಶ್ರೀನಿವಾಸಪುರದಿಂದ ಕನ್ನಲಿಗೆ ಸೇರುವ ರಸ್ತೆ (ಮಾರ್ಗ ಆದಿಚುಂಚನಗಿರಿ ವಿಶ್ವಮಾನವ ಶಾಲೆ, ತುಂಬಕೆರೆ, ಹನಕೆರೆ ಮತ್ತು ಗೌಡಗೆರೆ) ರಸ್ತೆ ಅಭಿವೃದ್ಧಿ | 50.00 |
| 5 | ಮಂಡ್ಯ ತಾ. ಕೀಲಾರ–ಅಲಕೆರೆ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 |
| 6 | ಮಂಡ್ಯ ಹಡಗಲಿ ರಸ್ತೆಯ 25ನೇ ಕಿ.ಮೀ.ನಿಂದ ಮಂಡ್ಯ ನಾಗಮಂಗಲ ರಸ್ತೆಯನ್ನು ಸೇರುವ ರಸ್ತೆ (ಮಾರ್ಗ ಹುನಗನಹಳ್ಳಿ ಎಂ. ಹಟ್ನ ನಂದಹಳ್ಳಿ) ಅಭಿವೃದ್ಧಿ | 50.00 |

ಮೇಲ್ಕಂಡ ಕಾಮಗಾರಿಗಳು 2008–09ನೇ ಸಾಲಿನ ಆಯವ್ಯಯ ಅಪೆಂಡಿಕ್ಸ್–ಇ ನಲ್ಲಿ ಸೇರ್ಪಡೆಗೊಂಡಿವೆ. ಈ ಹಿನ್ನೆಲೆಯಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 733 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2008.**

ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೋಕಿನ ಈ ಕೆಳಕಂಡ 6 (ಆರು) ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರ. ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಶಿವಳ್ಳಿಯಿಂದ ಎಂಎನ್ ರಸ್ತೆಯ ಸ: 22.00 ರಿಂದ ಗುನ್ನಾಯ್ಕನಹಳ್ಳಿ ಸೇರುವ ರಸ್ತೆಯ ಸ: 0.00 ರಿಂದ 5.50 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 |
| 2 | ಬಿ.ಹಟ್ನದಿಂದ ಎಂ ಹೊಸಹಳ್ಳಿ–ಚೋಕನಹಳ್ಳಿ–ಉಪ್ಪರಕನಹಳ್ಳಿ ಮಾರ್ಗವಾಗಿ ಸೇರುವ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 |
| 3 | ಬಿಬಿ ಬಿಟಿ ರಸ್ತೆಯಿಂದ ಯಲಿಯೂರು ಎಲೆಚಾಕನಹಳ್ಳಿ ಮುಖಾಂತರ ಬಿಎನ್ ರಸ್ತೆಯಿಂದ ಹೊಳಲು ರಸ್ತೆಯ ಸೇರುವ ರಸ್ತೆಯ ಆಯ ಭಾಗಗಳಲ್ಲಿ ಅಭಿವೃದ್ಧಿ | 50.00 |
| 4 | ಶ್ರೀನಿವಾಸಪುರದಿಂದ ಕನ್ನಲಿಗೆ ಸೇರುವ ರಸ್ತೆ (ಮಾರ್ಗ ಆದಿಚುಂಚನಗಿರಿ ವಿಶ್ವಮಾನವ ಶಾಲೆ, ತುಂಬಕೆರೆ, ಹನಕೆರೆ ಮತ್ತು ಗೌಡಗೆರೆ) ರಸ್ತೆ ಅಭಿವೃದ್ಧಿ | 50.00 |
| 5 | ಮಂಡ್ಯ ತಾ. ಕೀಲಾರ–ಅಲಕೆರೆ ರಸ್ತೆ ಅಭಿವೃದ್ಧಿ ಕಾಮಗಾರಿ | 50.00 |
| 6 | ಮಂಡ್ಯ ಹಡಗಲಿ ರಸ್ತೆಯ 25ನೇ ಕಿ.ಮೀ.ನಿಂದ ಮಂಡ್ಯ ನಾಗಮಂಗಲ ರಸ್ತೆಯನ್ನು ಸೇರುವ ರಸ್ತೆ (ಮಾರ್ಗ ಹುನಗನಹಳ್ಳಿ ಎಂ. ಹಟ್ನ ನಂದಹಳ್ಳಿ) ಅಭಿವೃದ್ಧಿ | 50.00 |

ಈ ಆಡಳಿತಾತ್ಮಕ ಅನುಮೋದನೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಮೇಲ್ಕಂಡ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮ ಮತ್ತು ಕರ್ನಾಟಕ ಪಾರದರ್ಶಕತೆ ನಿಯಮಗಳ ಉಪಬಂಧಗಳ ಪ್ರಕಾರವೇ ಕೈಗೊಳ್ಳತಕ್ಕದ್ದು.
2. ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಂಡು ತ್ವರಿತವಾಗಿ ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.
4. ಈ ಕಾಮಗಾರಿಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 5054 ರಸ್ತೆ ಮತ್ತು ಸೇತುವೆಗಳು ಅಡಿಯಲ್ಲಿ ಈ ಉದ್ದೇಶಕ್ಕಾಗಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.
5. ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಅಧೀಕ್ಷಕ ಇಂಜಿನಿಯರ್ ಈ ಕಾಮಗಾರಿಗಳನ್ನು ಖುದ್ದಾಗಿ ಪರಿವೀಕ್ಷಿಸಿ ನಿರ್ಧಿಷ್ಟಪಡಿಸಿದ ಅವಧಿಯೊಳಗೆ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.103

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಎಚ್‌ಎಂಐಎಸ್ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಐ.ಟಿ., ಪ್ರೊಫೆಷನಲ್ಸ್‌ಗಳ ಸಂಭಾವನೆ ಹೆಚ್ಚಳ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂ: ಕೆಎಚ್‌ಎಸ್‌ಡಿಆರ್‌ಪಿ/ಎಚ್‌ಎಂಐಎಸ್/05/2007–08, ಬೆಂಗಳೂರು, ದಿ: 28–4–2008.

**ಪ್ರಸ್ತಾವನೆ :**

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಎಚ್‌ಎಂಐಎಸ್ ಶಾಖೆಗೆ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಡಿ.ಎಲ್. ದೇವರಾಜ್, ಪ್ರೋಗ್ರಾಮರ್ ಮತ್ತು ಶ್ರೀಮತಿ ಪ್ರಿಯಾ ಶಿರೋಡ್‌ಕರ್, ಸಹಾಯಕ ಪ್ರೋಗ್ರಾಮರ್ ಇವರುಗಳನ್ನು ಎಚ್‌ಎಂಐಎಸ್ ಅಡಿಯಲ್ಲಿ ಅಗತ್ಯವಿರುವ ಸಮಗ್ರ ಮಾಹಿತಿ ವರದಿ ಮಾಡುವ

ಗಣಕ ವ್ಯವಸ್ಥೆಯನ್ನು ರಚನೆ ಮಾಡುವ ಕಾರ್ಯಕ್ಕಾಗಿ ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದಲ್ಲಿ ನೇಮಕ ಮಾಡಿಕೊಳ್ಳಲಾಗಿದೆ. ಸದರಿಯವರುಗಳು ಹೆಚ್ಚಿನ ವಿದ್ಯಾರ್ಹತೆ ಮತ್ತು ಪರಿಣಿತಿ ಹೊಂದಿದ್ದು ಸಂಭಾವನೆಯನ್ನು ಹೆಚ್ಚಿಸುವಂತೆ ಕೋರಿ ಮನವಿಗಳನ್ನು ಸಲ್ಲಿಸಿರುತ್ತಾರೆ. ಯೋಜನಾ ಕಚೇರಿಯಲ್ಲಿ ಅವರುಗಳ ಸೇವೆಯು ಅತ್ಯಗತ್ಯವಾಗಿದೆ ಹಾಗೂ ತೃಪ್ತಿಕರವಾಗಿರುವುದೆಂದು ಉಪ ನಿರ್ದೇಶಕರು (ಎಚ್‌ಎಂಐಎಸ್) ಇವರು ವರದಿ ಮಾಡಿರುತ್ತಾರೆ. ಸದರಿಯವರುಗಳ ಮನವಿಗಳನ್ನು ಪರಿಶೀಲಿಸಿ, ನಿರ್ಮಲ ನಗರ ಪಟ್ಟಣಗಳಲ್ಲಿ ಹಾಗೂ ಜಿಲ್ಲಾ ನಗರಾಭಿವೃದ್ಧಿ ಕೋಶಗಳಲ್ಲಿ ಸಲಹೆಗಾರರಾಗಿ ಸೇವೆ ಸಲ್ಲಿಸುತ್ತಿರುವ ಮಾಹಿತಿ ತಂತ್ರಜ್ಞಾನ ಸಲಹೆಗಾರರುಗಳಿಗೆ ಅವರುಗಳ ವಿದ್ಯಾರ್ಹತೆ ಮತ್ತು ಅನುಭವದ ಆಧಾರದಲ್ಲಿ ಪೌರಾಡಳಿತ ನಿರ್ದೇಶನಾಲಯವು ಸುತ್ತೋಲೆ ಸಂಖ್ಯೆ: ಪೌನಿ/ನಿನ/ಸಿಆರ್/92/2003-04, ದಿನಾಂಕ 1-8-2006ರಲ್ಲಿ ಸಂಭಾವನೆಯನ್ನು ಪರಿಷ್ಕರಿಸಿರುವುದನ್ನು ಪರಿಗಣಿಸಿ, ಈ ಐಟಿ ಪ್ರೊಫೆಷನಲ್ಸ್‌ಗಳಿಗೆ ಮುಂದಿನ ಯೋಜನಾ ಚಾಲನಾ ಸಮಿತಿಯಲ್ಲಿ ಅನುಸಮರ್ಥನೆ ಪಡೆಯಲು ಪ್ರಸ್ತಾವನೆ ಮಂಡಿಸುವುದನ್ನು ಬಾಕಿಯಿಟ್ಟು ದಿನಾಂಕ 1-11-2008 ರಿಂದ ಜಾರಿಗೆ ಬರುವಂತೆ ಸಂಭಾವನೆಯನ್ನು ಹೆಚ್ಚಿಸಲು ತೀರ್ಮಾನಿಸಲಾಗಿದೆ.

ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ(ಪಿಆರ್) 01 ವಿಬ್ಯಾನೆ 2009 ಬೆಂಗಳೂರು, ದಿನಾಂಕ: 5ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಎಚ್.ಎಂ.ಐ.ಎಸ್. ವಿಭಾಗದ ಅಡಿಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಈ ಕೆಳಕಂಡ ಐ.ಟಿ., ಪ್ರೊಫೆಷನಲ್ಸ್‌ಗಳಿಗೆ ಅವರ ಹೆಸರಿನ ಮುಂದೆ ತೋರಿಸಿರುವಂತೆ ಸಂಭಾವನೆಯನ್ನು ದಿನಾಂಕ 1-11-2008 ರಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು | ಹುದ್ದೆ | ಹಾಲಿ ಪಡೆಯುತ್ತಿರುವ ಸಂಭಾವನೆ (ಪ್ರತಿ ಮಾಹೆಗೆ) | ಪರಿಷ್ಕೃತಗೊಳಿಸಿದ ಸಂಭಾವನೆ (ಪ್ರತಿ ಮಾಹೆಗೆ) |
|---|---|---|---|---|
| 1 | ಶ್ರೀ ಡಿ.ಎಲ್. ದೇವರಾಜ್ | ಪ್ರೋಗ್ರಾಮರ್ | ರೂ. 15,000.00 | ರೂ. 20,000.00 |
| 2 | ಶ್ರೀಮತಿ ಪ್ರಿಯಾ ಶಿರೋಡ್‌ಕರ್ | ಸಹಾಯಕ ಪ್ರೋಗ್ರಾಮರ್ | ರೂ. 10,000.00 | ರೂ. 13,000.00 ಮತ್ತು ಮಾಸಿಕ ರೂ. 2,000/- ಬ್ಯಾಕ್ ಎಂಡೆಡ್ (ಒಂದು ವರ್ಷ ಮುಗಿದ ನಂತರ) |

ಇವರುಗಳ ಗುತ್ತಿಗೆ ನೇಮಕಾತಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ಷರತ್ತುಗಳು ಜಾರಿಯಲ್ಲಿರುತ್ತವೆ.

ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿರುವ ಮೇಲ್ಕಂಡ ಐಟಿ ಪ್ರೊಫೆಷನಲ್ಸ್‌ಗಳು ದಿನಾಂಕ 1-11-2008 ರಿಂದ ಜಾರಿಗೆ ಬರುವಂತೆ ಒಂದು ಹೊಸ ಕರಾರು ಪತ್ರವನ್ನು ಸಹಿ ಮಾಡಿಕೊಡತಕ್ಕದ್ದು. ಸದರಿ ಐಟಿ ಪ್ರೊಫೆಷನಲ್ಸ್‌ಗಳು ದಿನಾಂಕ 1-11-2008 ಪ್ರಾರಂಭವಾಗಿ ಹನ್ನೆರಡು ತಿಂಗಳುಗಳ ಸೇವೆಯನ್ನು ಪೂರ್ಣಗೊಳಿಸಿದ ತರುವಾಯವೇ ಬ್ಯಾಂಕ್ ಎಂಡೆಡ್ ಸಂಭಾವನೆಯನ್ನು ಪಡೆಯಲು ಅರ್ಹರಾಗುವರು. ಒಂದು ವೇಳೆ ಸದರಿ ಐಟಿ ಪ್ರೊಫೆಷನಲ್ಸ್‌ಗಳು ದಿನಾಂಕ 1-11-2008 ರಿಂದ ಹನ್ನೆರಡು ತಿಂಗಳುಗಳ ಸೇವೆ ಪೂರ್ಣಗೊಳಿಸುವ ಮುಂಚೆಯೇ ಯೋಜನೆಯ ಕರ್ತವ್ಯವನ್ನು ಬಿಟ್ಟಲ್ಲಿ ಅಥವಾ ಕರ್ತವ್ಯದಿಂದ ಬಿಡುಗಡೆಗೊಳಿಸಲ್ಪಟ್ಟಲ್ಲಿ ಬ್ಯಾಂಕ್ ಎಂಡೆಡ್ ಸಂಭಾವನೆಯನ್ನು ಯಾವುದೇ ತಿಂಗಳುಗಳಿಗೆ ಪಾವತಿ ಮಾಡತಕ್ಕದ್ದಲ್ಲ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2210-06-800-0-84-051 (ಸಾಮಾನ್ಯ ವೆಚ್ಚ)" ದಡಿ 2008-09ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.327

**ಸುಷಮಾ ಗೋಡಬೋಲೆ**

ಸರ್ಕಾರದ ಉಪ ಕಾರ್ಯದರ್ಶಿ,

ಕೆಹೆಚ್‌ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ: ಲೋಇ 210 ಸೇಸಕಿ 08, ಬೆಂಗಳೂರು, ದಿನಾಂಕ: 22ನೇ ಜನವರಿ 2009.**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 76 ಸೇಸಕಿ 97 ದಿನಾಂಕ 29–3–2003ರಲ್ಲಿ ದಿನಾಂಕ 1–1–1980 ರಿಂದ 1–2–2003ರವರೆಗೆ ಇದ್ದಂತೆ ಪ್ರಕಟಿಸಲಾಗಿದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 6–8–2008ರ ಪತ್ರದಲ್ಲಿ ಶ್ರಿ ಕೆ.ಹೆಚ್. ಶಂಕರ್, ಸಹಾಯಕ ಇಂಜಿನಿಯರ್‌ರವರು ಪ್ರಥಮವಾಗಿ ಕಿರಿಯ ಇಂಜಿನಿಯರ್ ಹುದ್ದೆಗೆ ನೇಮಕಗೊಂಡಿದ್ದು ನಂತರದಲ್ಲಿ ಬಿ.ಇ. ಸಿವಿಲ್ ಪದವಿಯನ್ನು ಹೊಂದಿದ ಕಾರಣ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆಯನ್ನು ದಿನಾಂಕ 2–12–2002ರಂದು ಹೊಂದಿದ್ದು ದಿನಾಂಕ 13–12–2002ರಂದು ಸಹಾಯಕ ಇಂಜಿನಿಯರ್ ವೃಂದಕ್ಕೆ ಕಾರ್ಯವರದಿ ಮಾಡಿಕೊಂಡು ಕರ್ತವ್ಯ ನಿರ್ವಹಿಸುತ್ತಿದ್ದು ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿನ ಅವಕಾಶದಂತೆ ಕಿರಿಯ ಇಂಜಿನಿಯರ್ ವೃಂದದ 1/3 ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಪ್ರಸ್ತುತ ಚಾಲ್ತಿಯಲ್ಲಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ; ಲೊಇ 76 ಸೇಸಕಿ 97, ದಿ: 29–3–2003 ರಲ್ಲಿ ಹೊರಡಿಸಿದ ಸಹಾಯಕ ಇಂಜಿನಿಯರ್ ವೃಂದದ ತಾತ್ಕಾಲಿಕಾ ಜೇಷ್ಠತಾ ಪಟ್ಟಿಯಲ್ಲಿ ಇವರ ಹೆಸರನ್ನು ಸೇರ್ಪಡೆ ಮಾಡುವ ಬಗ್ಗೆ ಪ್ರಸ್ತಾಪಿಸಿ ಅಗತ್ಯ ದಾಖಲೆ ಹಾಗೂ ಸೇವಾ ಪುಸ್ತಕಗಳನ್ನು ಶಿಫಾರಸ್ಸಿನೊಂದಿಗೆ ಸಲ್ಲಿಸಿರುತ್ತಾರೆ.

ಶ್ರೀ ಕೆ.ಹೆಚ್. ಶಂಕರ್, ಸಹಾಯಕ ಇಂಜಿನಿಯರ್ ಇವರು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಚೇರಿ, ಲೋಕೋಪಯೋಗಿ ಇಲಾಖೆ, ನಂ. 1ನೇ ಉಪ ವಿಭಾಗ, ರಾಮನಗರ ಇವರು ಪ್ರಥಮವಾಗಿ ದಿನಗೂಲಿ ಆಧಾರದ ಮೇಲೆ ದಿನಾಂಕ 16–12–1986ರಲ್ಲಿ ಡಿಪ್ಲೋಮೋ ಇಂಜಿನಿಯರ್ ಹುದ್ದೆಗೆ ನೇಮಕಗೊಂಡು ನಂತರ ಮಾಸಿಕ ವೇತನ ಸಿಬ್ಬಂದಿಯಾಗಿ ಕಾರ್ಯನಿರ್ವಹಿಸುತ್ತಿದ್ದು 10 ವರ್ಷಗಳ ಸೇವೆಯನ್ನು ಪೂರೈಸಿದ ನಂತರ ದಿನಾಂಕ 16–12–1996 ರಿಂದ ಜಾರಿಗೆ ಬರುವಂತೆ ಇವರ ಸೇವೆಯನ್ನು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿನ ಸಕ್ರಮಗೊಳಿಸಲಾಗಿರುತ್ತದೆ. ನಂತರ ಸದರಿಯವರು ಬಿ.ಇ. (ಸಿವಿಲ್) ಪದವಿಯನ್ನು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ದಿನಾಂಕ 6–4–2002ರಲ್ಲಿ ಪಡೆದಿದ್ದು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕಲ್ಪಿಸಲಾಗಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದಕ್ಕೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ದಿನಾಂಕ 2–12–2002ರ ಜ್ಞಾಪನಾ ಪತ್ರದಲ್ಲಿ ವೃಂದ ಬದಲಾವಣೆಯನ್ನು ಹೊಂದಿ, ದಿನಾಂಕ 13–12–2002ರಂದು ಸಹಾಯಕ ಇಂಜಿನಿಯರ್ ವೃಂದಕ್ಕೆ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಪ್ರಸ್ತುತ ಸದರಿ ಸಹಾಯಕ ಇಂಜಿನಿಯರ್‌ರವರ ಜೇಷ್ಠತೆಯನ್ನು ಚಾಲ್ತಿಯಲ್ಲಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಬಗ್ಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಶಿಫಾರಸ್ಸಿನಂತೆ ಪರಿಶೀಲಿಸಿದ್ದು, ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಸದರಿಯವರು ಸಕ್ರಮಾತಿ ಸೇವೆಯಲ್ಲಿ ದಿನಾಂಕ 16–12–1996 ರಿಂದ 12–12–2000 ರವರೆಗೆ ಕಿರಿಯ ಇಂಜಿನಿಯರ್ ವೃಂದದಲ್ಲಿ ಸಲ್ಲಿಸಿದ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ 10–12–2000ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ, ಅಧಿಸೂಚನೆ ಸಂಖ್ಯೆ: ಲೋಇ 76 ಸೇಸಕಿ 97 ದಿನಾಂಕ 29–3–2003ರಲ್ಲಿ ಪ್ರಕಟಿಸಲಾಗಿರುವ ತಾತ್ಕಾಲಿಕ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ 3710–ಎ ರಲ್ಲಿ ಈ ಕೆಳಕಂಡಂತೆ ನಿಗದಿಪಡಿಸಲು ತೀರ್ಮಾನಿಸಿದೆ.

| Sl. No. | Ranking No. | Previous A.E. Grd. No. | Name of the Engineer | SC/ ST | Date of Birth | Date of Entry into service | Date of appoint ment to the cadre | Remarks |
|---|---|---|---|---|---|---|---|---|
| 1 | 3710 (A) | - | Shankar K.H. | - | 21-11-66 | 16-12-96 | 13-12-2000*<br>16-12-1996 | DWR<br>CC |

*National date for the purpose of consideration for promotion to the cadre of AEE Divn-1.

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು 560 001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.449

**ಲಕ್ಷ್ಮೀನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು-ಬಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್. ಯೋಗೀಶ್ವರಪ್ಪ ಮತ್ತು ಡಾ: ವಿ.ಪಿ. ದಯಾನಂದ ಇವರ ಸೇವೆಯನ್ನು ಸ್ವಾಯತ್ತ ಸಂಸ್ಥೆಯಾದ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ; ಆಕುಕ 199 ಎಂಎಂಸಿ 2006, ದಿನಾಂಕ 13-11-2006.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 66 ಎಂಸಿಎಲ್ 2006, ದಿನಾಂಕ 1-3-2007.
3. ಸಂಖ್ಯೆ: ಎಸ್.ಆರ್.ಓ. (2)/61/2007-08, ದಿನಾಂಕ 23-6-2007.
4. ಅನಧಿಕೃತ ಟಿಪ್ಪಣಿ ಸಂಖ್ಯೆ: ಕಾಇ 320 ಎಲ್ಎಸ್ಐ 2007, ದಿನಾಂಕ 6-9-2008.
5. ಬೆಂವೈವಿ/ಸಿ(2)/34/2006-07, ದಿನಾಂಕ 3-10-2008.

**ಪ್ರಸ್ತಾವನೆ :**

ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಮಾ ವೈದ್ಯಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ: ಸಿ.ಎನ್. ಯೋಗೀಶ್ವರಪ್ಪ ಮತ್ತು ಡಾ: ವಿ.ಪಿ. ದಯಾನಂದ ಇವರನ್ನು ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಕ್ರಮವಾಗಿ ಪ್ಲಾಸ್ಟಿಕ್ ಸರ್ಜರಿ ವಿಭಾಗ ಹಾಗೂ ಅರವಳಿಕೆ ಶಾಸ್ತ್ರ ವಿಭಾಗದಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗೆ 2 ವರ್ಷಗಳ ಅವಧಿಗೆ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ನಿಯೋಜನೆ ಮೇಲೆ ನೇಮಿಸಲಾಗಿತ್ತು. ಪ್ರಕಾರ, ಇವರು ಕ್ರಮವಾಗಿ ದಿನಾಂಕ 18-11-2006 ಮತ್ತು ದಿನಾಂಕ 5-3-2007 ರಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್. ಯೋಗೀಶ್ವರಪ್ಪ, ಸುರೂಪಿಕಾ ಶಸ್ತ್ರ ಚಿಕಿತ್ಸಾ ಶಾಸ್ತ್ರ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರಿಗೆ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಯಲ್ಲಿ ಕೆಲವು ಷರತ್ತಿಗೊಳಪಟ್ಟು ವಿಲೀನಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಕಾರ್ಮಿಕ ಇಲಾಖೆಯ ಮೇಲೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್. ಯೋಗೀಶ್ವರಪ್ಪ, ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರನ್ನು ಕ್ರಮವಾಗಿ ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಅರವಲಿಕೆ ಶಾಸ್ತ್ರ ವಿಭಾಗದಲ್ಲಿನ ಉಪನ್ಯಾಸಕರ ಹುದ್ದೆಗಳಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಅಭ್ಯಂತರವಿಲ್ಲವೆಂದು ತಿಳಿಸಿದೆ.

ನಿರ್ದೇಶಕರು, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ರವರ ಮೇಲೆ (5)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಉಪನ್ಯಾಸಕರುಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಡಾ: ಸಿ.ಎನ್. ಯೋಗೀಶ್ವರಪ್ಪ, ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರನ್ನು ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿನ ಉಪನ್ಯಾಸಕರ ಹುದ್ದೆಯಲ್ಲಿ ಜೇಷ್ಠತೆಯನ್ನು ನಿರ್ಧರಿಸುವುದಕ್ಕೊಳಪಟ್ಟು ಶಾಶ್ವತವಾಗಿ ವಿಲೀನಗೊಳಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಉಪನ್ಯಾಸಕರುಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್.ಯೋಗೀಶ್ವರಪ್ಪ, ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರನ್ನು ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯ ಸೇವೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 244 ಎಂಪಿಎಸ್ 2007, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2008.**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1997ರ ನಿಯಮ 16(ಎ)(ii)ರ ಪ್ರಕಾರ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ಈ ಕೆಳಕಂಡ ವಿಮಾ ವೈದ್ಯಾಧಿಕಾರಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರೂ. 8000–13500 ಗಳ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯ ಉಪನ್ಯಾಸಕರ ಹುದ್ದೆಯಲ್ಲಿ ಸ್ವಾಯತ್ತ ಸಂಸ್ಥೆಯಾದ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಸೇವೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಲಾಗಿದೆ.

| | | |
|---|---|---|
| 1. | ಡಾ: ಸಿ.ಎನ್. ಯೋಗೀಶ್ವರಪ್ಪ,<br>ಉಪನ್ಯಾಸಕರು (ನಿಯೋಜನೆ ಮೇಲೆ),<br>ಪ್ಲಾಸ್ಟಿಕ್ ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು | ಉಪನ್ಯಾಸಕರು,<br>ಪ್ಲಾಸ್ಟಿಕ್ ಸರ್ಜರಿ ವಿಭಾಗ,<br>ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು |
| 2. | ಡಾ: ವಿ.ಪಿ. ದಯಾನಂದ,<br>ಉಪನ್ಯಾಸಕರು (ನಿಯೋಜನೆ ಮೇಲೆ),<br>ಅರವಳಿಕೆ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು | ಉಪನ್ಯಾಸಕರು,<br>ಅರವಳಿಕೆ ಶಾಸ್ತ್ರ ವಿಭಾಗ,<br>ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು |

**ಷರತ್ತುಗಳು**

1. **Designation & Scale :** On their absorption the teaching staff will be allowed to draw their pay and allowances as in the relevant Government order with effect from the date of issue of the Government order on absorption.
2. **Pay and Allowance :** On their absorption the teaching staff will be allowed to draw their pay and allowances as in the relevant Government order with effect from the date of issue of the Government order on absorption.
3. **Pension/Family Pension :** Those who have been appointed before 1-4-2006 will be governed by the Pension rules as would havee been applicable if they had continued in the Department. In respect of those appointed on or after 1-4-2006, the Contributory Pension Scheme will be applicable.

4. **Superannuation :** The age of superannuation will be as applicable to other Government employees.
5. **Revision of Pay :** As and when the AICTE revises the pay scales, revision will be considered by the Government subject to financial implications.
6. **Leave/Medical benefits :** As per KCSR and Karnataka Government Servants (Medical Attendance) Rules.
7. **Seniority, Service and Conduct Rules :** Separate orders will be issued in consultation with the DPAR.
8. **GPF/KGID/Group Insurance :** As per the relevant rules.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎಸ್ 08, ದಿನಾಂಕ 25–8–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.194

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ, ಔರಾದ್ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶೆಂಬಳ್ಳಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 20/09/2008ರ ಪತ್ರದ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2008–09/5143.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೀದರ್ ಜಿಲ್ಲೆ, ಔರಾದ್ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶೆಂಬಳ್ಳಿ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಬೀದರ್ ಪ್ರಿನ್ಸಿಪಲ್ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 25/05/2000
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 30/04/2002

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಲ್ಲಿ ಸೇರಿದ್ದ ಶೆಂಬಳ್ಳಿ ಗ್ರಾಮದ ಕೆಲವೊಂದು ಸ.ನಂ.ಗಳ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ:52/04, 54/04 ಮತ್ತು 48/04ರಲ್ಲಿ ಬೀದರ್‌ನ ಹಿರಿಯ ಶ್ರೇಣಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಪ್ರಕರಣಗಳನ್ನು ಒಟ್ಟುಗೂಡಿಸಿ ಮುಖ್ಯ ಪ್ರಕರಣ ಎಲ್.ಎ.ಸಿ. 52/04ರಲ್ಲಿ ಹೆಚ್ಚಿನ ಪರಿಹಾರ ಧನ ಪಾವತಿಸಲು ಮಾನ್ಯ ಸಿವಿಲ್ ನ್ಯಾಯಾಲಯವು ದಿನಾಂಕ 25/01/08ರ ಸಾಮಾನ್ಯ ತೀರ್ಪಿನಲ್ಲಿ ಆದೇಶಿಸಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ

ಅಗತ್ಯವಿಲ್ಲವೆಂದು ಕಾನೂನು ಅಧಿಕಾರಿ–III ಕಂದಾಯ ಇಲಾಖೆ (ಎಲ್‌ಎಸಿ) ಇವರು ಪತ್ರ ಸಂಖ್ಯೆ:ಆರ್‌ಡಿ 442 ಎಲ್‌ಸಿಜಿ 2008, ದಿನಾಂಕ 24/11/08ರಲ್ಲಿ ಅಭಿಪ್ರಾಯ ನೀಡಿರುತ್ತಾರೆ

ಅದೇ ರೀತಿ ಶೇಂಬಳ್ಳಿ ಗ್ರಾಮದ ಸ.ನಂ.22/1 ಮತ್ತು 18/1–2ರ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚುವರಿ ಪರಿಹಾರ ಧನಕ್ಕಾಗಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ:50/04ರಲ್ಲಿ ಬೀದರ್‌ನ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣ ಸಂಖ್ಯೆ:52/04ರಲ್ಲಿಯ ತೀರ್ಪನ್ನು ಉಲ್ಲೇಖಿಸಿ ಸದರಿ ಜಮೀನುಗಳಿಗೂ ಹೆಚ್ಚಿನ ಪರಿಹಾರ ಧನ ಪಾವತಿಸಲು ದಿನಾಂಕ 27/05/08 ಹಾಗೂ 25/01/08ರಂದು ತೀರ್ಪು ನೀಡಿದೆ. ಆದ್ದರಿಂದ, ಈ 4 ಪ್ರಕರಣಗಳಿಗೆ ನ್ಯಾಯಾಲಯದ ತೀರ್ಪಿನಂತೆ ಪಾವತಿಸಬೇಕಾದ ಹೆಚ್ಚಿನ ಪರಿಹಾರ ಧನದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಶೇಂಬಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 52/04 | 16/3ಎ<br>16/4ಎ | 6–00 | 1233432 |
| 2 | 54/04 | 16/3ಎ<br>16/43 | 4–20 | 0925074 |
| 3 | 48/04 | 18/1<br>18/2 | 6–00 | 1233432 |
| 4 | 50/04 | 22/1<br>18/1–2 | 3–01<br>5–10 | 1701105 |
| | **ಒಟ್ಟು** | | | **5093043** |

* ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 141 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 30ನೇ ಡಿಸೆಂಬರ್ 2008**.

ಬೀದರ್ ಜಿಲ್ಲೆ, ಔರಾದ್ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಶೆಂಬಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಬೀದರ್‌ನ ಹಿರಿಯ ಶ್ರೇಣಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.50,93,043–00 ಗಳನ್ನು (ಐವತ್ತು ಲಕ್ಷದ ತ್ತೊಂಭತ್ತ್ಮೂರು ಸಾವಿರದ ನಲವತ್ತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02/09/2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 259

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ವ್ಯಾಸನಕೆರೆ ಏತ ನೀರಾವರಿ ಯೋಜನೆ 1ನೇ ಹಾಗೂ 2ನೇ ಹಂತದ ರೈಸಿಂಗ್ ಮೈನ್ ಅಭಿವೃದ್ಧಿ ಕಾಮಗಾರಿಯ ಟೆಂಡರ್‌ನ್ನು ಅನುಮೋದಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 26 ಏನೀಯೋ 2008, ದಿನಾಂಕ 31/03/2008.
2. ದಿನಾಂಕ 20/11/2008ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ-12/2008-09/6141.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 04/12/08ರ ಪತ್ರ ಸಂಖ್ಯೆ:ಮುಸದ/ಆಪ್ತಶಾಖೆ/ಟೆಂಡರ್/08-09/4330

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ವ್ಯಾಸನಕೆರೆ ಏತ ನೀರಾವರಿ ಯೋಜನೆ 1ನೇ ಹಾಗೂ 2ನೇ ಹಂತದ ರೈಸಿಂಗ್ ಮೈನ್ ಅಭಿವೃದ್ಧಿ ಕಾಮಗಾರಿಯ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 31/03/2008ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರು ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಮಾಡಲಾಗಿದೆ.

| | | |
|---|---|---|
| 1 | ಬಳ್ಳಾರಿ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:01/09/2008 |
| 2 | ಕರ್ನಾಟಕ ರಾಜ್ಯ ಪತ್ರ | ದಿ:11/09/2008 |
| 3 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:05/10/2008 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ 8 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಿ ಅದರಂತೆ ಟೆಂಡರ್ ಫಾರಂಗಳನ್ನು ಪಡೆದಿದ್ದು, ಇವರಲ್ಲಿ 4 ಜನ ಗುತ್ತಿಗೆದಾರರು ಮಾತ್ರ ನಿಗಧಿತ ದಿನದಂದು ಭರ್ತಿ ಮಾಡಿದ ತಾಂತ್ರಿಕ ಮತ್ತು ಆರ್ಥಿಕ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಟೆಂಡರ್‌ಗಳನ್ನು ದಿನಾಂಕ 23/10/08ರಲ್ಲಿ ತೆರೆಯಲಾಗಿದ್ದು, ಇದರಲ್ಲಿ ಅರ್ಹತೆ ಹೊಂದಿದ್ದ 3 ಜನ ಗುತ್ತಿಗೆದಾರರ ಆರ್ಥಿಕ ಟೆಂಡರ್‌ಗಳನ್ನು ಅಂದೇ ತೆರೆಯಲಾಗಿದ್ದು, 3 ಜನ ಗುತ್ತಿಗೆದಾರರ ಆರ್ಥಿಕ ಟೆಂಡರ್‌ನಲ್ಲಿ ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.68,75,300/- |
| ಪಿ.ಎಸ್.ಸಿ. ಪೈಪ್‌ಗಳಿಗೆ ಪ್ರಸಕ್ತ ಮಾರುಕಟ್ಟೆ ದರಗಳಂತೆ ಪರಿಗಣಿಸಿದ ಟೆಂಡರಿಗೆ ಇಡಲಾದ ಮೊತ್ತ | ರೂ.90,14,856/- |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ (ರೂ.ಗಳಲ್ಲಿ) | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ | ಪ್ರಸಕ್ತ ಮಾರುಕಟ್ಟೆ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಎಂ.ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು. ಬಳ್ಳಾರಿ | ರೂ.99,98,028/- | 45.41 ಹೆಚ್ಚು | 10.91ಹೆಚ್ಚು |

| | | | | |
|---|---|---|---|---|
| 2 | ಕರ್ನಾಟಕ ಸಿಮೆಂಟ್ ಪೈಪ್ ಫ್ಯಾಕ್ಟರಿ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ. | ರೂ.1,06,66,552/– | 55.14 ಹೆಚ್ಚು | 18.32 ಹೆಚ್ಚು |
| 3 | ದೊಡ್ಡಹನುಮಂತಪ್ಪ, 1ನೇ ದರ್ಜೆ ಗುತ್ತಿಗೆದಾರರು, ಹೊಸಪೇಟೆ | ರೂ.1,31,30,097/– | 90.97 ಹೆಚ್ಚು | 45.64 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ.1ರಲ್ಲಿರುವ ಶ್ರೀ ಎಂ. ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ಮೊತ್ತ ರೂ.99,98,028/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿರುವ ದರಗಳನ್ನು ಚಾಲ್ತಿ ದರಗಳಿಗೆ ಹೋಲಿಸಿದಾಗ ಶೇಕಡ 10.91ರಷ್ಟು ಹೆಚ್ಚಾಗಿದ್ದು, ದರಗಳನ್ನು ಕಡಿಮೆ ಮಾಡುವ ಸಲುವಾಗಿ ಮುಖ್ಯ ಇಂಜಿನಿಯರ್‌ರವರ ಮಟ್ಟದಲ್ಲಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಿದ್ದು, ಗುತ್ತಿಗೆದಾರರು ಚಾಲ್ತಿ ದರಗಳನ್ನು ಪರಿಗಣಿಸಿದ ಟೆಂಡರ್ ಮೊತ್ತದ ಮೇಲೆ ಶೇ.10.00ರಷ್ಟು ಹೆಚ್ಚಿನ ದರಗಳಲ್ಲಿ ನಿರ್ವಹಿಸಲು ಒಪ್ಪಿರುವುದಾಗಿ ಅದರಂತೆ ಅವರ ಟೆಂಡರ್ ಮೊತ್ತ ರೂ.99,16,342/–ಗಳಾಗುವುದಾಗಿ ತಿಳಿಸಿ, ಈ ಮೊತ್ತಕ್ಕೆ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 10/11/08ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಗೆ ಸೂಚಿಸಲಾಗಿತ್ತು. ಅದರಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ದಿನಾಂಕ 26/11/2008ರ ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಗುತ್ತಿಗೆದಾರರು ಸೂಚಿಸಿರುವ ದರಗಳು ಪ್ರಸಕ್ತ ದರಪಟ್ಟಿಗೆ ಹೋಲಿಸಿದಾಗ ಶೇ.10.00ರಷ್ಟು ಹೆಚ್ಚಾಗಿರುವುದರಿಂದ, ಈ ದರಗಳನ್ನು ಕಡಿಮೆ ಮಾಡುವಂತೆ ತಿಳಿಸಲಾಯಿತು. ಇದಕ್ಕೆ ಗುತ್ತಿಗೆದಾರರು ಪ್ರತಿಕ್ರಯಿಸುತ್ತಾ, ಪ್ರಸ್ತುತ ಸಿಮೆಂಟ್ ಹಾಗೂ ಉಕ್ಕಿನ ದರಗಳು ಟೆಂಡರ್‌ನಲ್ಲಿ ಪರಿಗಣಿಸಿದ ದರಗಳಿಗಿಂತ ಹೆಚ್ಚಾಗಿರುವುದರಿಂದ, ಈ ಟೆಂಡರ್‌ನಲ್ಲಿ ನಮೂದಿಸಿರುವ ದರಗಳು ಸಮಂಜಸವಾಗಿರುವುದಾಗಿ ತಿಳಿಸಿದರು. ಗುತ್ತಿಗೆದಾರರ ವಿವರಣೆಯನ್ನು ಕೇಳಿದ ನಂತರ ಅವರು ತಿಳಿಸಿದ ಕಾರಣಗಳನ್ನು ಪರಿಗಣಿಸಿ ಟೆಂಡರ್‌ಗಿಟ್ಟ ಮೊತ್ತ ರೂ.90,14,856ಗಳ ಮೇಲೆ ಶೇ.10.00ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ಶ್ರೀ ಎಂ. ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುತ್ತಾರೆಂದು ತಿಳಿಸಿ ಟೆಂಡರ್ ಪರಿಶೀಲನಾ ಸಭೆಯ ನಡವಳಿಗಳೊಂದಿಗೆ ಸಮಿತಿಯ ಅಧ್ಯಕ್ಷರೂ ಆದ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸದರಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆಗೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 60 ಏನೀಯೋ 2008, ಬೆಂಗಳೂರು, ದಿನಾಂಕ 29ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ವ್ಯಾಸನಕೆರೆ ಏತ ನೀರಾವರಿ ಯೋಜನೆ 1ನೇ ಹಾಗೂ 2ನೇ ಹಂತದ ರೈಸಿಂಗ್ ಮೈನ್ ಅಭಿವೃದ್ಧಿ ಕಾಮಗಾರಿಯನ್ನು ಚಾಲ್ತಿ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.90,14,856ಗಳ ಮೇಲೆ ಶೇ.10.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.99,16,342/–ಗಳಿಗೆ (ತೊಂಭತ್ತೊಂಭತ್ತು ಲಕ್ಷದ ಹದಿನಾರು ಸಾವಿರದ ಮುನ್ನೂರ ನಲವತ್ತೆರಡು ರೂ.ಗಳು ಮಾತ್ರ) ಶ್ರೀ ಸಿದ್ದರಾಮನಗೌಡ, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ ಇವರಿಗೆ ಕೆಳಕಂಡ ಷರತ್ತುಗಳೊಂದಿಗೆ ಕಾಮಗಾರಿಯನ್ನು ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 258

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಉತ್ತರ ಕನ್ನಡ ಜಿಲ್ಲೆ, ಮುಂಡಗೋಡ ತಾಲ್ಲೂಕು, ಚಿಗಳ್ಳಿ ಕೆರೆ ದುರಸ್ತಿ ಹಾಗೂ ಆಧುನೀಕರಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ದಿನಾಂಕ 06/11/08ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ ಎಇ–2/2008–09/5886.
2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 04/12/08ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/4330

**ಪ್ರಸ್ತಾವನೆ:**

ಉತ್ತರ ಕನ್ನಡ ಜಿಲ್ಲೆ, ಮುಂಡಗೋಡ ತಾಲ್ಲೂಕು, ಚಿಗಳ್ಳಿ ಕೆರೆ ದುರಸ್ತಿ ಹಾಗೂ ಆಧುನೀಕರಣ ಕಾಮಗಾರಿಯ 126.00 ಲಕ್ಷ ರೂ.ಗಳ ಅಂದಾಜಿಗೆ ಸರ್ಕಾರದ ಆದೇಶ ಸಂಖ್ಯೆ: ಸನೀಇ 34 ಕೆಜಿದು 2008, ದಿನಾಂಕ 29/03/2008ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಸಿಇಆರ್ ಸಂ;4/08–09ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಳಿಯಾಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ದತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:31/03/2008 |
| 2 | ಕರ್ನಾಟಕ ರಾಜ್ಯ ಪತ್ರ | ದಿ:17/04/2008 |
| 3 | ರಾಜ್ಯ ಟೆಂಡರ್ ಬುಲೆಟಿನ್ | ದಿ:21/04/2008 |
| 4 | ಉದಯವಾಣಿ ದಿನಪತ್ರಿಕೆ | ದಿ:23/04/2008 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ, ಅಂತಿಮವಾಗಿ ದಿನಾಂಕ 26/08/08ರಂದು ಪ್ರಕಟಣೆಯನ್ನು ಹೊರಡಿಸಿ ಭರ್ತಿ ಮಾಡಿದ ಟೆಂಡರ್ ಸಲ್ಲಿಸುವ ದಿನಾಂಕ 16/09/08ಕ್ಕೆ ನಿಗದಿಪಡಿಸಿರುತ್ತಾರೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 16/09/2008ರಂದು ತೆರೆಯಲಾಗಿ, ಈ ಇಬ್ಬರು ಗುತ್ತಿಗೆದಾರರ ಟೆಂಡರ್‌ಗಳು ಅರ್ಹವಾಗಿದ್ದರಿಂದ, ಅವರು ಸಲ್ಲಿಸಿದ್ದ ಆರ್ಥಿಕ ಬಿಡ್‌ಗಳನ್ನು ದಿನಾಂಕ 27/09/08ರಂದು ತೆರೆಯಲಾಗಿದ್ದು, ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.1,19,19,288/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.1,23,76,533/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ | 1,48,95,553/– | 24.97 ಹೆಚ್ಚು | 20.35ಹೆಚ್ಚು |
| 2 | ಎಂ.ಬಿ.ನಂದೀಶ, 1ನೇ ದರ್ಜೆ ಗುತ್ತಿಗೆದಾರರು, ಹಾಸನ | 1,78,55,541/– | 49.80 ಹೆಚ್ಚು | 44.27 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ.1ರಲ್ಲಿರುವ ಶ್ರೀ ಜಿ. ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ಮೊತ್ತ ರೂ.1,48,95,553–00 ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.35ರಷ್ಟು ಹೆಚ್ಚಾಗಿದ್ದು, ಮುಖ್ಯ ಇಂಜಿನಿಯರ್‌ರವರು ರವರು ಗುತ್ತಿಗೆದಾರರೊಂದಿಗೆ ಸಂದಾನ ನಡೆಸಿದ್ದು, ಗುತ್ತಿಗೆದಾರರು ತಮ್ಮ ದರಗಳನ್ನು ಶೇ.20.35ರಿಂದ ಶೇ.17.00ಗಳಿಗೆ (ಟೆಂಡರ್ ಮೊತ್ತ ರೂ.1,44,80,544–00ಗಳಿಗೆ) ಕಡಿಮೆ ಮಾಡಲು ಸಮ್ಮತಿಸಿರುತ್ತಾರೆ. ಚಾಲ್ತಿ ದರಪಟ್ಟಿಯ ಮೇಲೆ ಶೇ.6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರಿಗೆ ಅಧಿಕಾರ ಇಲ್ಲದೇ ಇದ್ದುದರಿಂದ, ಸರ್ಕಾರದ ಅನುಮೋದನೆಗಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 06/11/2008ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಟೆಂಡರ್ ಅಂಗೀಕರಿಸಲು ಸರ್ಕಾರದ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಕರಣವನ್ನು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಮುಂದೆ ಮಂಡಿಸುವಂತೆ ಸೂಚಿಸಿದ್ದರ ಮೇರೆಗೆ ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 26/11/2008ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,23,76,533–00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,39,23,600–00ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಕುಂದಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಿದ್ದು, ಇದಕ್ಕೆ ಗುತ್ತಿಗೆದಾರರು ಸಮ್ಮತಿ ನೀಡಿರುವುದಾಗಿ ತಿಳಿಸಿ ಸಭೆಯ ನಡವಳಿಗಳೊಂದಿಗೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ 04/12/08ರ ಪತ್ರದಲ್ಲಿ ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 73 ಕೆಜಿದು 2008, ಬೆಂಗಳೂರು, ದಿನಾಂಕ 30ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆ, ಮುಂಡಗೋಡ ತಾಲ್ಲೂಕು, ಚಿಗಳ್ಳಿ ಕೆರೆ ದುರಸ್ತಿ ಹಾಗೂ ಆಧುನೀಕರಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.1,23,76,533–00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,39,23,600–00ಗಳಿಗೆ (ಒಂದು ಕೋಟಿ ಮೂವತ್ತೊಂಭತ್ತು ಲಕ್ಷದ ಇಪ್ಪತ್ಮೂರು ಸಾವಿರದ ಆರುನೂರು ರೂ.ಗಳು ಮಾತ್ರ) ಶ್ರೀ ಜಿ. ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು, ಕುಂದಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.260

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಸುರಪುರ ತಾಲ್ಲೂಕು, ದೇವಾಪುರ ಗ್ರಾಮದ ಹತ್ತಿರ ಏತ ನೀರಾವರಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 10 ಏನೀಯೋ 2005, ದಿನಾಂಕ 27/01/07.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ 02/12/2008 ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ–5/ 2008–09/6375.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಸುರಪುರ ತಾಲ್ಲೂಕು, ದೇವಾಪುರ ಗ್ರಾಮದ ಹತ್ತಿರ ಏತ ನೀರಾವರಿ ಕಾಮಗಾರಿಯ 294.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 27/01/07ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆದೇಶ ಸಂಖ್ಯೆ:04/2007–08ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆಯಲಾಗಿದ್ದು, ಟೆಂಡರ್‌ನ ಪ್ರಕಟಣೆಯನ್ನು ಮೊದಲನೆ ಬಾರಿಗೆ ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಕರ್ನಾಟಕ ರಾಜ್ಯ ಪತ್ರ | ದಿ:22/03/2007 |
| 2 | ರಾಜ್ಯ ಟೆಂಡರ್ ಬುಲೆಟಿನ್ | ದಿ:22/03/2007 |
| 3 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:24/03/2007 |

ಕಾರಣಾಂತರಗಳಿಂದ ಟೆಂಡರ್‌ನ್ನು ಮುಂದೂಡಿದ್ದು, ಅಂತಿಮವಾಗಿ ದಿನಾಂಕ 16/06/08ರಂದು ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:21/06/2008 |
| 2 | ಕರ್ನಾಟಕ ರಾಜ್ಯ ಪತ್ರ | ದಿ:26/06/2008 |
| 3 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:26/06/2008 |

ಈ ಟೆಂಡರ್ ಕರೆಗೆ ಸ್ಪಂದಿಸಿ ಪೂರ್ವಾಹತೆ ಟೆಂಡರ್ ಫಾರಂ ಪಡೆದಿದ್ದ 10 ಜನ ಗುತ್ತಿಗೆದಾರರಲ್ಲಿ 9 ಜನ ಗುತ್ತಿಗೆದಾರರು ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ನಿಗದಿತ ದಿನಾಂಕದಂದು ಸಲ್ಲಿಸಿದ್ದರು. ತೆರೆಯಲಾದ ಪೂರ್ವಾಹತಾ ಟೆಂಡರ್‌ನಲ್ಲಿ 6 ಜನ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದರಿಂದ, ಅವರುಗಳಿಗೆ ಖಾಲಿ ಆರ್ಥಿಕ ಬಿಡ್‌ಗಳ ಫಾರಂಗಳನ್ನು ನೀಡಲಾಗಿತ್ತು. ಇದರಲ್ಲಿ 3 ಜನ ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಆರ್ಥಿಕ ಬಿಡ್‌ಗಳನ್ನು ಸಲ್ಲಿಸಿದ್ದು, ಅವುಗಳನ್ನು ದಿನಾಂಕ 24/10/2008ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.2,83,06,313/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ.3,64,01,585/– |

| ಕ್ರ. ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎಸ್.ಆರ್. ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು | ರೂ.4,21,85,578/– | 49.03 ಹೆಚ್ಚು | 15.89 ಹೆಚ್ಚು |
| 2 | ಪಾಟೀಲ್ ಮತ್ತು ಪಾಟೀಲ ಕಂಪನಿ, 1ನೇ ದರ್ಜೆ ಗುತ್ತಿಗೆದಾರರು | ರೂ.4,48,00,694/– | 58.27 ಹೆಚ್ಚು | 23.07 ಹೆಚ್ಚು |
| 3 | ಕರಬಸಪ್ಪ ಕರಡಕಲ್ 1ನೇ ದರ್ಜೆ ಗುತ್ತಿಗೆದಾರರು | ರೂ.4,68,75,108/– | 65.60 ಹೆಚ್ಚು | 28.77 ಹೆಚ್ಚು |

ಮೇಲ್ಕಂಡ ಕ್ರ.ಸಂ.1ರಲ್ಲಿಯ ಶ್ರೀ ಎಸ್.ಆರ್. ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರು ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.89ರಷ್ಟು ಹೆಚ್ಚಾಗಿದ್ದು, ಸಂಧಾನದೊಂದಿಗೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 02/12/2008ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಟೆಂಡರ್‌ನಲ್ಲಿ ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಅವರೊಂದಿಗೆ ಸಂಧಾನ ನಡೆಸಲು ದಿನಾಂಕ 23/12/08ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರು ಪ್ರಚಲಿತದಲ್ಲಿ ಸಿಮೆಂಟ್ ಹಾಗೂ ಉಕ್ಕಿನ ದರಗಳು ಟೆಂಡರ್‌ನಲ್ಲಿ ನಿಗದಿಪಡಿಸಿರುವ ದರಗಳಿಗಿಂತ ಹೆಚ್ಚಾಗಿದ್ದು, ಈಗ ಟೆಂಡರ್‌ನಲ್ಲಿ ಅವರು ನಮೂದಿಸಿರುವ ದರಗಳು ಸಮಂಜಸವಾಗಿರುವುದಾಗಿ, ಆದರೂ ಪರಿಷ್ಕೃತ ಟೆಂಡರ್ ಮೊತ್ತದ ಮೇಲೆ ಶೇ.14.50ರಷ್ಟು ಹೆಚ್ಚಿನ ದರಗಳಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಗುತ್ತಿಗೆದಾರರು ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಗುತ್ತಿಗೆದಾರರು ವಿವರಣೆಯನ್ನು ಪರಿಗಣಿಸಿ ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಪರಿಷ್ಕೃತ ಟೆಂಡರ್‌ಗಿಟ್ಟ ಮೊತ್ತ ರೂ.3,64,01,585–00ಗಳ ಮೇಲೆ ಶೇ. 14.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,16,79,815–00ಗಳಿಗೆ ಶ್ರೀ ಎಸ್.ಆರ್. ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 65 ಏನೀಯೋ 2008, ಬೆಂಗಳೂರು, ದಿನಾಂಕ 30ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಸುರಪುರ ತಾಲ್ಲೂಕು, ದೇವಾಪುರ ಗ್ರಾಮದ ಹತ್ತಿರ ಏತ ನೀರಾವರಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಗಣಿಸಿದ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ ರೂ. 3,64,01,585–00ಗಳ ಮೇಲೆ ಶೇ. 14.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 4,16,79,815–00ಗಳಿಗೆ (ನಾಲ್ಕು ಕೋಟಿ ಹದಿನಾರು ಲಕ್ಷದ ಎಪ್ಪತ್ತೊಂಭತ್ತು ಸಾವಿರದ ಎಂಟುನೂರ ಹದಿನೈದು ರೂ.ಗಳು ಮಾತ್ರ) ಶ್ರೀ ಎಸ್.ಆರ್. ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು, ಗುಲ್ಬರ್ಗಾ ರವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.368

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಾಲಿಭಾಷ, ಪಿಐ (ಹಾಲಿ ಅಮಾನತ್ತು) ಮತ್ತು ಶ್ರೀ ವಜೀರ್ ಅಹ್ಮದ್ ಖಾನ್, ಪಿಎಸ್‌ಐ (ಹಾಲಿ ಅಮಾನತ್ತು) ರವರುಗಳನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004, ದಿನಾಂಕ 23–1–2004.

2. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ (5)/25/2003–04, ದಿನಾಂಕ 24–1–2008 ಮತ್ತು ದಿನಾಂಕ 12–6–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ವಾಲಿಭಾಷ, ಪಿ.ಐ., ಸಿ.ಸಿ.ಬಿ. ಬೆಂಗಳೂರು ಹಾಗೂ ಶ್ರೀ ವಜೀರ್ ಅಹ್ಮದ್ ಖಾನ್ ಪಿ.ಎಸ್.ಐ. ಸಿ.ಸಿ.ಬಿ. ಬೆಂಗಳೂರು ನಗರ ರವರ ವಿರುದ್ಧ ಛಾಪಾ ಕಾಗದ ಅವ್ಯವಹಾರಗಳ ಹಗರಣದಲ್ಲಿ ಭಾಗಿಯಾಗಿದ್ದಾರೆನ್ನಲಾದ ಆರೋಪದ ಮೇರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ 24–1–2008ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಸದರಿ ಪೊಲೀಸ್ ಅಧಿಕಾರಿಗಳನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ. ಮುಂದುವರೆದು, ಮೇಲೆ (2)ರಲ್ಲಿ ಓದಲಾದ ದಿನಾಂಕ 12–6–2008ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಛಾಪಾ ಕಾಗದದ ಹಗರಣಕ್ಕೆ ಸಂಬಂಧಿಸಿದಂತೆ ಕ್ರಿಮಿನಲ್ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ಶ್ರೀ ವಾಲಿಭಾಷ, ಪಿ.ಐ. ರವರ ವಿರುದ್ಧ ಯಾವುದೇ ಪ್ರಕರಣಗಳಲ್ಲಿ ಬಾಕಿ ಇರುವುದಿಲ್ಲವೆಂದೂ, ಆದರೆ ಶ್ರೀ ವಜೀರ್ ಅಹ್ಮದ್ ಖಾನ್, ಪಿ.ಎಸ್.ಐ. ರವರ ವಿರುದ್ಧ 35ನೇ ಅಡಿಷನಲ್ ಸಿಟಿ ಸಿವಿಲ್ ಸೆಷನ್ ಜಡ್ಜ್ ನ್ಯಾಯಾಲಯದಲ್ಲಿ ಸಿ.ಸಿ. ನಂ. 105/05ರ ಪ್ರಕರಣದಲ್ಲಿ ಆರೋಪಿಗಳ ಹೇಳಿಕೆಗಾಗಿ ದಿನಾಂಕ 15–5–2008ಕ್ಕೆ ಮುಂದೂಡಲಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

ದಿನಾಂಕ 27–3–2008ರಲ್ಲಿ ಮೇಲ್ಕಂಡ ಅಧಿಕಾರಿಗಳು ತಮ್ಮನ್ನು ಸೇವೆಯಿಂದ ಅಮಾನತ್ತುಗೊಳಿಸಿ 4 ವರ್ಷಗಳಾಗುತ್ತ ಬಂದಿದ್ದು ಶೇ. 50 ಜೀವನಾಧಾರ ಭತ್ಯೆಯಲ್ಲಿ ಜೀವನ ನಡೆಸಲು ತುಂಬಾ ಕಷ್ಟಕರವಾಗಿದ್ದು ತಮ್ಮನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಮನವಿ ಸಲ್ಲಿಸಿರುತ್ತಾರೆ.

ಮೇಲಿನ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 43 ಪೊಸಿಪ 2008, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ದಿನಾಂಕ 23–1–2004ರನ್ವಯ ಸೇವೆಯಿಂದ ಅಮಾನತ್ತುಗೊಂಡಿರುವ ಶ್ರೀ ವಾಲಿಭಾಷ, ಪಿ.ಐ. ಮತ್ತು ಶ್ರೀ ವಜೀರ್ ಅಹ್ಮದ್ ಖಾನ್, ಪಿ.ಎಸ್.ಐ. ಇವರ ಅಮಾನತ್ತು ಆದೇಶವನ್ನು ತೆರವುಗೊಳಿಸಿ ಇವರ ವಿರುದ್ಧ ಇರುವ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಗೆ ಪುನರ್ ಸ್ಥಾಪಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.281

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಹಿನ್ನಲೆಯಲ್ಲಿ ಮುಂಜಾಗ್ರತೆಯ ಕ್ರಮವಾಗಿ ಶಾಂತಿಯನ್ನು ಕಾಪಾಡುವ ಹಿತದೃಷ್ಟಿಯಿಂದ ಬಂಧನಕ್ಕೊಳಪಡುವ ವ್ಯಕ್ತಿಗಳನ್ನು ಬಂಧಿಸಲು ಕರ್ನಾಟಕ ಕಾರಾಗೃಹಗಳ ನಿಯಮ, 1974ರ ನಿಯಮ (3)ರ ರೀತ್ಯಾ ಈ ಕೆಳಗಿನ ಕಟ್ಟಡವನ್ನು ದಿನಾಂಕ:13.10.2008 ರಿಂದ 19.10.2008 ರವರೆವಿಗೆ ತಾತ್ಕಾಲಿಕ ವಿಶೇಷ ಕಾರಾಗೃಹವೆಂದು ಘೋಷಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಜಿಲ್ಲಾ ಕಾರಾಗೃಹ ಉದ್ದೇಶಿತ ಕಟ್ಟಡ, ತರೀಕೆರೆ ರಸ್ತೆ, ಮಹಾತ್ಮ ಗಾಂಧಿ ಪಾರ್ಕ್ ಹಿಂಭಾಗ, ರತ್ನಗಿರಿಬೋರೆ, ಚಿಕ್ಕಮಗಳೂರು

ಈ ಕಾರಾಗೃಹದಲ್ಲಿ ಬಂಧಿತರಾಗುವ ಬಂಧಿಗಳಿಗೆ ಊಟ, ಉಪಹಾರ ಇತರೆ ವ್ಯವಸ್ಥೆಗಳನ್ನು ಹಾಗೂ ಬಂಧಿಗಳ ದಾಖಲಾತಿಗಳನ್ನು ಜಿಲ್ಲಾಧಿಕಾರಿಗಳ ವತಿಯಿಂದಲೂ ಹಾಗೂ ತಾತ್ಕಾಲಿಕ ಜೈಲುಗಳ ಭದ್ರತಾ ವ್ಯವಸ್ಥೆಯನ್ನು ಪೊಲೀಸ್ ಇಲಾಖೆಯಿಂದಲೂ ನಿರ್ವಹಿಸಲು ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1453

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಶಿಕ್ಷಣ ಸಚಿವಾಲಯ

**ವಿಷಯ:** ರಾಜ್ಯವಲಯ ಮುಂದುವರೆದ ಯೋಜನಾ ಕಾರ್ಯಕ್ರಮದಡಿ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡಗಳ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಇಡಿ:83:ಯೋಯೋಕ 2008, ದಿನಾಂಕ:26.4.2008

2. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ ಡಿಟಿಇ 60 ಬಿ.ಎಲ್.ಡಿ. 2007, ದಿನಾಂಕ:30.7.2008.

**ಪ್ರಸ್ತಾವನೆ:**

1) ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2008–09ನೇ ಸಾಲಿಗೆ ರಾಜ್ಯ ವಲಯದ ಮುಂದುವರೆದ ಯೋಜನಾ ಕಾರ್ಯಕ್ರಮಗಳಡಿ ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ಕೊಠಡಿಗಳ ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 4202–01–104–1–01–139 [ಯೋಜನೆ] ಅಡಿ 3000.00 ಲಕ್ಷರೂಗಳನ್ನು [ಮೂರುಸಾವಿರ ಲಕ್ಷರೂಗಳು ಮಾತ್ರ] ಮಂಜೂರು ಮಾಡಲಾಗಿದೆ.

2) ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರುರವರು, 2008–09ನೇ ಸಾಲಿಗೆ ರಾಜ್ಯವಲಯ ಮುಂದುವರೆದ ಯೋಜನಾ ಕಾರ್ಯಕ್ರಮದಡಿ ಲೆಕ್ಕ ಶೀರ್ಷಿಕೆ 4202–10–104–1–01–139 [ಯೋಜನೆ] ಅಡಿ ಒದಗಿಸಿರುವ 3000.00 ಲಕ್ಷರೂಗಳಲ್ಲಿ [ಮೂರು ಸಾವಿರ ಲಕ್ಷರೂಗಳು ಮಾತ್ರ] 1128.48 ಲಕ್ಷ ರೂಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 174 :ಯೋಸಕಾ 2007[ಭಾಗ], ಬೆಂಗಳೂರು, ದಿನಾಂಕ:3ನೇ ಅಕ್ಟೋಬರ್ 2008**

**[ಇಡಿ :164:ಸ್ವೀಮರ (ಯುನಿಕ್) 2008, ದಿನಾಂಕ:3–10–2008**

4) 2008–09ನೇ ಸಾಲಿಗೆ ಲೆಕ್ಕ ಶೀಷಿಕೆ 4202–01–104–01–139 [ಯೋಜನೆ] ಅಡಿ ಒದಗಿಸಿರುವ 3000.00 ಲಕ್ಷರೂಗಳಲ್ಲಿ [ಮೂರು ಸಾವಿರ ಲಕ್ಷರೂ.ಗಳು ಮಾತ್ರ]1080.00 ಲಕ್ಷ ರೂ ಗಳನ್ನು [ಒಂದು ಸಾವಿರದ ಎಂಭತ್ತುಲಕ್ಷ ರೂಪಾಯಿಗಳು ಮಾತ್ರ] ಸರ್ಕಾರಿ ಪಾಲಿಟೆಕ್ನಿಕ್‌ಗಳ ಕಟ್ಟಡ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ ಬಿಡುಗಡೆ ಮಾಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರುವರಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಅನುಮತಿ ನೀಡಿದೆ.

**ಷರತ್ತುಗಳು:**

- 2008–09ನೇ ಸಾಲಿಗೆ ಅಪೆಂಡಿಕ್ಸ್–ಇ ನಡಿ ನಮೂದಿಸಲಾಗಿರುವ ಮುಂದುವರೆದ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಮುನ್ನ ಪೂರ್ಣಗೊಳ್ಳುವ ಕಾಮಗಾರಿಗಳಿಗೆ ಆದ್ಯತೆ ನೀಡಿ ಕಾಮಗಾರಿಯನ್ನು ಪೂರ್ಣ ಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು.
- ಸದರಿ ಕಾಮಗಾರಿಗಳನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸತಕ್ಕದ್ದು
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸಂಬಂಧಿಸಿದ ಪಾಲಿಟೆಕ್ನಿಕ್‌ಗಳ ಪ್ರಾಂಶುಪಾಲರಿಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.
- ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು

- ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸದ ನಂತರ ಸಂಬಂಧಿಸಿದ ಪಾಲಿಟೆಕ್ನಿಕ್ ನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಅವರಿಗೆ ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.
- ಅನುದಾನವನ್ನು ಬಿಡುಗಡೆ ಮಾಡುವ ಮುನ್ನ ಆರ್ಥಿಕ ಇಲಾಖೆಯು ಹೊರಡಿಸಿರುವ ಅಧಿಕೃತ ಜ್ಞಾಪನ ಆಇ:1.ಟಿ.ಎಫ್.ಪಿ. 2008, ದಿನಾಂಕ:16–5.2008ನ್ನು ಪಾಲಿಸಲು ಸೂಚಿಸಿದೆ.

5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಶಿಇ 1213:ಐಎಫ್(ಬಿಯು) 2008, ದಿನಾಂಕ:3.10.2008ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1455 **ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ಕಿಶೋರಿ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ:ಡಿಪಿಜಿ/ಮೈವಿ/ 29:2003–04 ದಿನಾಂಕ:10–6–2004, 4–3–2008 ಮತ್ತು 24.7.2008.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳಲ್ಲಿ ಡಾ:ಕಿಶೋರಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರು ದಿನಾಂಕ:1.12.2000 ರಲ್ಲಿ ಸಾರ್ವಜನಿಕ ಆಸ್ಪತ್ರೆ ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ನೇಮಕಾತಿ ಹೊಂದಿದ ಸಮಯದಲ್ಲಿ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿದ್ದು, ಹೆರಿಗೆ ರಜೆಯಿಂದಾಗಿ ಹಾಜರಾತಿ ಕಡಿಮೆಯಾದ ಕಾರಣ ದಿನಾಂಕ:1.1.2001 ರಿಂದ 7.7.2001 ರವರೆಗೆ ಸರ್ಕಾರದ ಅನುಮತಿಯೊಂದಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿರುತ್ತಾರೆ. ಆದರೆ ಸ್ನಾತಕೋತ್ತರ ವ್ಯಾಸಂಗವನ್ನು ಮುಗಿಸಲು ನೀಡಿದ ಅವಧಿಯು ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗಿಲ್ಲವೆಂಬುದಾಗಿ ಚಿಕ್ಕಮಗಳೂರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ವರದಿ ನೀಡಿರುವುದರಿಂದ, ಸದರಿಯವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಗಳು 1977ರ ನಿಯಮ 6 ಅಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 729 ಹೆಚ್ಎಸ್ಹೆಚ್ 2007, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಡಾ: ಕಿಶೋರಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ ಇವರು ದಿನಾಂಕ:8.7.2001 ರಿಂದ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ಉಪನಿಯಮ 6 ರ ಅಡಿಯಲ್ಲಿ ದಿನಾಂಕ:8.7.2001 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1456 **ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಸಿವಿಲ್ ಜಡ್ಜ್ (ಕಿ.ವಿ) ಮತ್ತು ಹೆಚ್ಚುವರಿ ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮನಗರ ಇದನ್ನು ಪ್ರಧಾನ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಎಂದು ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಪತ್ರದ ಸಂಖ್ಯೆ:ಜಿಓಬಿ II. 145/2008, ದಿನಾಂಕ:5.9.2008

2) ಸರ್ಕಾರಿ ಆದೇಶ ಸಂಖ್ಯೆ:ಲಾ 47 ಎಲ್‌ಸಿಇ 2004, ದಿನಾಂಕ:23.6.2005.

**ಪ್ರಸ್ತಾವನೆ:**

ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ, ಇವರು ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ರಾಮನಗರದ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಹೆಚ್ಚುವರಿ ಜೆ.ಎಂ.ಎಫ್.ಸಿ ನ್ಯಾಯಾಲಯವನ್ನು ಮರು ಪದನಾಮಗೊಳಿಸಲು ಕೋರಲಾಗಿದೆ., ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ., ರಾಮನಗರ ಎಂದು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಇದನ್ನು ಪ್ರಧಾನ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ರಾಮನಗರ ಎಂದು ಮರು ಪದನಾಮಗೊಳಿಸಿ ಆದೇಶ ಹೊರಡಿಸಲು ಪ್ರಸ್ತಾಪಿಸಿ ಸರ್ಕಾರವನ್ನು ಕೋರಿರುತ್ತಾರೆ.

ಈ ಮೇರೆಗೆ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಲಾ 191 ಎಲ್ ಸಿಇ 2008, ಬೆಂಗಳೂರು, ದಿನಾಂಕ:14ನೇ ಅಕ್ಟೋಬರ್ 2008**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ರಾಮನಗರದ ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವನ್ನು "ಪ್ರಧಾನ ಸಿವಿಲ್ ಜಡ್ಜ್(ಕಿ.ವಿ) ಮತ್ತು ಜೆ.ಎಂ.ಎಫ್.ಸಿ., ನ್ಯಾಯಾಲಯ, ರಾಮನಗರ" ಎಂದು ಮರು ಪದನಾಮಗೊಳಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1458 **ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ:** ಶ್ರೀ ಎ.ಹೆಚ್. ಪಾಟೀಲ್ ನೋಟರಿ, ಗದಗ್ ಇವರ ರಾಜೀನಾಮೆ ಅಂಗೀಕರಿಸಿ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:** 1) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ:2189/2008 ದಿನಾಂಕ 16.8.2008

2) ಶ್ರೀ ಎ.ಹೆಚ್.ಪಾಟೀಲ್, ನೋಟರಿ, ಗದಗ್‌ರವರ ಮನವಿ ದಿನಾಂಕ:14.8.2008ರ

**ಪ್ರಸ್ತಾವನೆ:**

ಶ್ರೀ ಎ.ಹೆಚ್. ಪಾಟೀಲ್, ನೋಟರಿ, ಗದಗ್‌ರವರು 2006 ಮತ್ತು 2007ನೇ ಸಾಲಿನ ರಿಜಿಸ್ಟರ್ ತಪಾಸಣೆಗೊಳಪಡಿಸದ ಕಾರಣ ವಿವರ ಕೋರಲಾಗಿತ್ತು. ಅದಕ್ಕೆ ಉತ್ತರವಾಗಿ ಅವರಿಗೆ 88 ವರ್ಷ ವಯಸ್ಸಾಗಿದ್ದು, ಅನಾರೋಗ್ಯದ ಕಾರಣ ಯಾವುದೇ ನೋಟರಿ ಕೆಲಸ ನಿರ್ವಹಿಸಿರುವುದಿಲ್ಲ. ಅನಾರೋಗ್ಯದಿಂದ ನೋಟರಿಯಾಗಿ ಮುಂದುವರಿಯಲು ಸಾಧ್ಯವಾಗದಿದ್ದರಿಂದ ಸದರಿ ಹುದ್ದೆಯಿಂದ ನಿವೃತ್ತಿ ಬಯಸುತ್ತಿರುವುದಾಗಿ ಮತ್ತು ಜೂನ್ 2007ರಿಂದ ನೋಟರಿ ಪ್ರಮಾಣ ಪತ್ರವನ್ನು ನವೀಕರಿಸಿಕೊಂಡಿಲ್ಲವೆಂದು ತಿಳಿಸಿ, ದಿನಾಂಕ:14.8.08 ರಂದು ರಾಜೀನಾಮೆ ಮನವಿಯನ್ನು ಸಲ್ಲಿಸಿದ್ದಾರೆ. ಅದರಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ:16.8.2008ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ್ ಇವರು ಶ್ರೀಯುತರ ನೋಟರಿ ವೃತ್ತಿ ಪ್ರಮಾಣ ಪತ್ರದ ಅವಧಿಯು ಜುಲೈ 2007ಕ್ಕೆ ಮುಕ್ತಾಯಗೊಂಡಿದ್ದು, ನಂತರ ಯಾವುದೇ ಕರ್ತವ್ಯ ನಿರ್ವಹಿಸಿರುವುದಿಲ್ಲವೆಂದು ಹಾಗೂ ಸದರಿಯವರು ದಿನಾಂಕ:14.8.2008ರಂದು ಸಲ್ಲಿಸಿರುವ ರಾಜೀನಾಮೆ ಮನವಿಯನ್ನು ಕಳುಹಿಸಿರುತ್ತಾರೆ.

ಸರ್ಕಾರವು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಗದಗ್ ರವರ ಪ್ರಸ್ತಾವನೆಯನ್ನು ಹಾಗೂ ನೋಟರಿಯವರ ಮನವಿಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಲಾ 99 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್ 2008**

ಶ್ರೀ ಎ.ಹೆಚ್. ಪಾಟೀಲ್, ನೋಟರಿ, ಗದಗ್ ಇವರು ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:14.7.07ರಲ್ಲಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡ ದಿನಾಂಕದಿಂದ ಜಾರಿಗೊಂಡಂತೆ ಅಂಗೀಕರಿಸಲಾಗಿದೆ ಮತ್ತು ಶ್ರೀಯುತರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ10(ಎ)(ಬಿ)(ಸಿ) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1459 **ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–2) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಎಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 20 ಇಮುವಿ 2008, ಬೆಂಗಳೂರು, ದಿನಾಂಕ:18ನೇ ಅಕ್ಟೋಬರ್ 2008**

ಶ್ರೀ ಎಚ್.ಎಂ. ಖಯ್ಯೂಂ ಅಲಿ ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರು ತಮ್ಮ ಸೇವಾವಧಿಯಲ್ಲಿ ಅಕ್ರಮವಾಗಿ ಅಪಾರ ಪ್ರಮಾಣದ ಆಸ್ತಿ ಪಾಸ್ತಿಗಳನ್ನು ಗಳಿಸಿದ್ದಾರೆಂಬ ಮಾಹಿತಿಯ ಮೇರೆಗೆ ಕರ್ನಾಟಕ ಲೋಕಾಯುಕ್ತದ ಪೋಲಿಸರು ದಿನಾಂಕ:27.6.2008 ಹಾಗೂ 30.6.2008ರಂದು ಅವರ ಮನೆ ಅವರ ಮಾವನ ಮನೆ, ಅವರ ಕಛೇರಿಯ ಕೋಣೆ ಹಾಗೂ ಅವರ ಬ್ಯಾಂಕ್ ಲಾಕರ್‌ಗಳನ್ನು ಶೋಧಿಸಿದ್ದು ಅದರಿಂದಾಗಿ ಅವರು ಬೆಂಗಳೂರಿನಲ್ಲಿ ರೂ. 2,09,50,000–00 ಮೌಲ್ಯದ 7 ಸ್ಥಿರಾಸ್ತಿಗಳನ್ನು ಹಾಗೂ ರೂ. 2,79,34,601–00 ಮೌಲ್ಯದ ಚಿನ್ನ, ಬೆಳ್ಳಿ, ಕಾರು, ಗೃಹೋಪಯೋಗಿ ವಸ್ತುಗಳು, ನಗದು, ಬ್ಯಾಂಕ್ ಖಾತೆ ಇತ್ಯಾದಿ ಚರಾಸ್ತಿಗಳನ್ನು ಹೊಂದಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದಲೂ;

ಶ್ರೀ ಎಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರು ತಮ್ಮ ಆದಾಯದ ಬಲ್ಲ ಮೂಲಗಳಿಗಿಂತಲೂ ರೂ. 2,37,34,601–00 ಮೌಲ್ಯಕ್ಕೂ ಹೆಚ್ಚಿನ ಆಸ್ತಿ ಪಾಸ್ತಿಗಳನ್ನು ಹೊಂದಿದ್ದು, ಇವರ ವಿರುದ್ಧ ವಿವರವಾದ ತನಖೆ ಅಗತ್ಯವಿದ್ದು ತನಿಖೆಯನ್ನು ಕಾಯ್ದಿಟ್ಟು ಅವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಕಂಡುಬಂದಿರುವುದರಿಂದಲೂ;

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಅಅ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎಚ್.ಎಂ. ಖಯ್ಯೂಂ. ಅಲಿ ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರ ವಿರುದ್ಧ ಲೋಕಾಯುಕ್ತ ತನಿಖೆಯನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಚ್.ಎಂ. ಖಯ್ಯೂಂ ಅಲಿ ಅಪರ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರು ಕೆ.ಸಿ.ಎಸ್.ಆರ್ಸ್, ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಚ್.ಎಂ. ಖಯ್ಯೂಂ ಅಲಿ ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರು ಇಲಾಖೆ ಅವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಶ್ರೀ ಎಚ್.ಎಂ. ಖಯ್ಯೂಂ ಅಲಿ, ಅಪರ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಅವರ ಸ್ಥಾನಕ್ಕೆ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆಯನ್ನು ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರು ಕ್ರಮವನ್ನು ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1461

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಇ–ಸ್ಟಾಂಪಿಂಗ್ ಮೂಲಕ ಸಂಗ್ರಹಿಸುವ ಮುದ್ರಾಂಕ ಶುಲ್ಕವನ್ನು ಪ್ರತ್ಯೇಕ ಲೆಕ್ಕಶೀರ್ಷಿಕೆಯಲ್ಲಿ ಜಮಾ ಮಾಡುವ ಹಾಗೂ ಇ–ಸ್ಟಾಂಪಿಂಗ್ ಪದ್ಧತಿಯ ಅವಧಿಯನ್ನು ವಿಸ್ತರಿಸುವ ಕುರಿತು–ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಕಂಇ 122 ಮುನೋಮು 2007, ದಿನಾಂಕ:13.2.2008.

2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಇ–ಸ್ಟಾಂಪಿಂಗ್ –01/08–09, ದಿನಾಂಕ:21.5.2008

3) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಇ–ಸ್ಟಾಂಪಿಂಗ್–04/07–08, ದಿನಾಂಕ:22.7.2008

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ದಿನಾಂಕ:13.2.2008ರ ಸರ್ಕಾರದ ಆದೇಶದಲ್ಲಿ ಇ–ಸ್ಟಾಂಪಿಂಗ್ ಪದ್ಧತಿಯನ್ನು ರಾಜ್ಯದಲ್ಲಿ ಬೆಂಗಳೂರು ನಗರದ 8 ಸ್ಥಳಗಳಲ್ಲಿ ಪ್ರಾಯೋಗಿಕವಾಗಿ 3 ತಿಂಗಳ ಅವಧಿಗೆ ಜಾರಿಗೆ ತರಲಾಗಿತ್ತು.

ಮೇಲೆ ಓದಲಾದ (2)ರ ದಿನಾಂಕ:21.5.2008ರ ಪತ್ರದಲ್ಲಿ ರಾಜ್ಯದಲ್ಲಿ ಇ–ಸ್ಟಾಂಪಿಂಗ್ ಮೂಲಕ ಪ್ರಾಯೋಗಿಕವಾಗಿ ಬೆಂಗಳೂರು ನಗರದ 8 ಸ್ಥಳಗಳಲ್ಲಿ ಮುದ್ರಾಂಕಶುಲ್ಕ ಸಂಗ್ರಹಿಸಲಾಗುತ್ತಿದ್ದು ಈ ಕ್ರಮದಲ್ಲಿ ಸಂಗ್ರಹಿಸಲಾದ ಮುದ್ರಾಂಕ ಶುಲ್ಕವನ್ನೂ ಸಹ 0030–02–103–001 ಲೆಕ್ಕಶೀರ್ಷಿಕೆಗೆ ಜಮೆ ಮಾಡಲಾಗುತ್ತಿದೆ. ಇದರಿಂದಾಗಿ ಮುದ್ರಾಂಕ ಶುಲ್ಕ ಸಂಗ್ರಹಿಸುವಲ್ಲಿ ಲೆಕ್ಕ ಮರುಹೊಂದಾಣಿಕೆ ಸಮರ್ಪಕವಾಗಿ ಆಗದೇ ಇರುವುದರಿಂದ, ಇ–ಸ್ಟಾಂಪಿಂಗ್ ಮೂಲಕ ಸಂಗ್ರಹಿಸುವ ಹಣವನ್ನು ಒಂದು ಪ್ರತ್ಯೇಕ ಲೆಕ್ಕ ಶೀರ್ಷಿಕೆಯಲ್ಲಿ ಜಮೆ ಮಾಡುವುದರಿಂದ ಲೆಕ್ಕ ಮರುಹೊಂದಾಣಿಕೆ ಕೆಲಸ ಸರಳವಾಗಿ ಆಗುವುದಲ್ಲದೇ ಜಮೆಯಾದ ಹಣದ ವಿವರಗಳನ್ನು ನಿರಂತರವಾಗಿ ಅವಲೋಕಿಸಬಹುದಾಗಿದೆ., ಆದ್ದರಿಂದ ಇ–ಸ್ಟಾಂಪಿಂಗ್

ಮೂಲಕ ಸಂಗ್ರಹಿಸುವ ಮುದ್ರಾಂಕ ಶುಲ್ಕ ಜಮೆ ಮಾಡಲು ಪ್ರತ್ಯೇಕ ಲೆಕ್ಕ ಶೀರ್ಷಿಕೆ ಒದಗಿಸುವಂತೆ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಕೋರಿದ್ದಾರೆ.

ಮೇಲೆ ಓದಲಾದ (3) ರ ದಿನಾಂಕ:22.7.2008ರ ಪತ್ರದಲ್ಲಿ ಬೆಂಗಳೂರು ನಗರದ 8 ಶಾಖೆಗಳಲ್ಲಿ ಪ್ರಾರಂಭಿಕವಾಗಿ ಪೈಲಟ್ ಆಧಾರದ ಮೇಲೆ ಪ್ರಾಯೋಗಿಕವಾಗಿ 3 ತಿಂಗಳ ಅವಧಿಗೆ ಜಾರಿಗೊಳಿಸಲಾದ ಇ–ಸ್ಟಾಂಪಿಂಗ್ ಮೂಲಕ ಮುದ್ರಾಂಕ ಶುಲ್ಕ ಸಂಗ್ರಹಣೆ ಅವಧಿಯು ದಿನಾಂಕ:14.6.2008ರಂದು ಮುಗಿದಿದ್ದು, ಸದರಿ ಮುದ್ರಾಂಕ ಶುಲ್ಕ ಸಂಗ್ರಹಣೆಗೆ ಸಂಬಂಧಿಸಿದಂತೆ, ಸರ್ಕಾರಿ ಆದೇಶ ಸಂಖ್ಯೆ:ಕಂಇ 122 ಮುನೋಮು 2007, ದಿನಾಂಕ:13.2.2008 ರಲ್ಲಿ ಮುದ್ರಾಂಕ ಇಲಾಖೆಯು ಜಾರಿಗೆ ತರುವ ದಿನಾಂಕದಿಂದ 3 ತಿಂಗಳ ಅವದಿ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ ಎಂದು ಆದೇಶಿಸಿದೆ. ಆದ್ದರಿಂದ ರಾಜ್ಯದ್ಯಂತ ಇ–ಸ್ಟಾಂಪಿಂಗ್ ಪದ್ದತಿ ಜಾರಿಗೆ ತರಬೇಕಾದರೆ ಅಂತರ್‌ಜಾಲ ಸಂಪರ್ಕ ಹಾಗೂ ಇ–ಸ್ಟಾಂಪಿಂಗ್ ಬಗ್ಗೆ ಮುದ್ರಾಂಕ ನಿಯಮಗಳನ್ನೂ ಇನ್ನೂ ಸಿದ್ದಪಡಿಸಿಲ್ಲವಾದ್ದರಿಂದ ಈ ಪದ್ದತಿಯ ಬಗ್ಗೆ ಖಾಯಂ ಆಗಿ ಒಪ್ಪಂದ ಮುಂದುವರೆಸಲು ಸಾಧ್ಯವಿಲ್ಲದ ಕಾರಣ ಪರೀಕ್ಷಾರ್ಥವಾಗಿ ಎಲ್ಲಾ ಷರತ್ತುಗಳನ್ನು ಪೂರೈಸುವವರೆಗೆ ಸರ್ಕಾರದ ಮುಂದಿನ ಆದೇಶದವರೆಗೆ ಈಗಿರುವ ಪೈಲಟ್ ಆಧಾರದ ಮೇಲೆ ಮುಂದುವರಿಸಲು ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 282 ಮುನೋಮು 2008, ಬೆಂಗಳೂರು, ದಿನಾಂಕ:23ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನಲೆಯಲ್ಲಿ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಇ-ಸ್ಟಾಂಪಿಂಗ್ ಮೂಲಕ ಸಂಗ್ರಹಿಸುವ ಮುದ್ರಾಂಕ ಶುಲ್ಕವನ್ನು ಲೆಕ್ಕಶೀರ್ಷಿಕೆ 0030–02–103–0–02ಗೆ ಜಮೆ ಮಾಡಲು ಆದೇಶಿಸಲಾಗಿದೆ.

ಅಲ್ಲದೇ ಪ್ರಾರಂಭಿಕವಾಗಿ ಪೈಲಟ್ ಆಧಾರದ ಮೇಲೆ ಜಾರಿಗೊಳಿಸಿರುವ ಇ–ಸ್ಟಾಂಪಿಂಗ್ ಪದ್ಧತಿಯನ್ನು ದಿನಾಂಕ:31.3.2009ರ ವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1280 ವೆಚ್ಚ–7/2008, ದಿನಾಂಕ:23.9.2008 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1516

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಕಂದಾಯ ಸಚಿವಾಲಯ**

**ವಿಷಯ:** ಹೊಸ ತಾಲ್ಲೂಕು ಪುನರ್ ರಚನಾ ಸಮಿತಿಯ ಕಾಲಾವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅದೇಶ ಸಂ.ಕಂಇ 28 ಭೂದಾಪು 2007 ದಿ:29.8.2007
2. ಸರ್ಕಾರದ ಆದೇಶ ಸಂ.ಕಂಇ 28 ಭೂದಾಪು 2007 ದಿ:15.10.2007
3. ಸರ್ಕಾರದ ಆದೇಶ ಸಂ. ಕಂಇ 16 ಭುದಾಪು 2008, ದಿ:1.3.2008
4. ಸರ್ಕಾರದ ಆದೇಶ ಸಂಖ್ಯೆ:ಕಂಇ 28 ಭೂದಾಪು 2007 ದಿನಾಂಕ:15.7.2008
5. ಸರ್ಕಾರದ ಆದೇಶ ಸಂಖ್ಯೆ:ಕಂಇ 28 ಭೂದಾಪು 2007 ದಿನಾಂಕ:22.8.2008

**ಪ್ರಸ್ತಾವನೆ:**

ರಾಜ್ಯದಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನೆ ಮಾಡುವ ಬಗ್ಗೆ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:29.8.2007ರಲ್ಲಿ ಅಧ್ಯಕ್ಷರು ಮತ್ತು 4 ಜನ ಸದಸ್ಯರನ್ನೊಳಗೊಂಡ ತಾಲ್ಲೂಕು ಪುನರ್ ರಚನಾ ಸಮಿತಿಯನ್ನು ರಚಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:5.10.2007 ರಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನಾ ಸಮಿತಿಗೆ ಈ ಕೆಳಕಂಡ ತಜ್ಞರನ್ನು ನೇಮಿಸಿ ಆದೇಶಿಸಲಾಗಿರುತ್ತದೆ. ಹಾಗೂ ಸದರಿ ಸಮಿತಿಯು ತನ್ನ ಮೊದಲನೆ ಸಭೆ ಸೇರಿದ ದಿನಾಂಕದಿಂದ 6 ತಿಂಗಳೊಳಗಾಗಿ ವರದಿಯನ್ನು ಸಲ್ಲಿಸತಕ್ಕದ್ದೆಂದು ತಿಳಿಸಲಾಗಿರುತ್ತದೆ.

| | | |
|---|---|---|
| 1 | ಶ್ರೀ. ಎಂ.ಬಿ. ಪ್ರಕಾಶ್, ಐ.ಎ.ಎಸ್ (ನಿವೃತ್ತ) | ಅಧ್ಯಕ್ಷರು |
| 2 | ಶ್ರೀ ಚಿರಂಜೀವಿಸಿಂಗ್, ಐ.ಎ.ಎಸ್ (ನಿವೃತ್ತ) | ಸದಸ್ಯರು |
| 3 | ಶ್ರೀ ಕೃಷ್ಣಕುಮಾರ್, ಐ.ಎ.ಎಸ್ (ನಿವೃತ್ತ) | ಸದಸ್ಯರು |
| 4 | ಶ್ರೀ ಹೆಚ್.ಕೆ. ಶಿವಾನಂದ, ಐ.ಎ.ಎಸ್ (ನಿವೃತ್ತ) | ಸದಸ್ಯರು |
| 5 | ಶ್ರೀ ಹೆಚ್. ಶಶಿಧರ್, ಐ.ಎ.ಎಸ್. | ಸದಸ್ಯ ಕಾರ್ಯದರ್ಶಿ |

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:1.3.2008ರಲ್ಲಿ ಶ್ರೀ ಎಸ್. ಕೃಷ್ಣಕುಮಾರ್, ಐ.ಎ.ಎಸ್. (ನಿವೃತ್ತ) ಇವರನ್ನು ಹೊಸ ತಾಲ್ಲೂಕುಗಳ ಪುನರ್ ರಚನಾ ಸಮಿತಿಯ ಸದಸ್ಯರನ್ನಾಗಿ ನೇಮಕ ಮಾಡಿರುವುದನ್ನು ಕೈಬಿಡಲಾಗಿರುತ್ತದೆ.

ತಾಲ್ಲೂಕು ಪುನರ್ ರಚನಾ ಸಮಿತಿಯ ಮೊದಲ ಸಭೆ ದಿನಾಂಕ:25.1.2008 ರಂದು ಜರುಗಿದ್ದು, ಮೇಲ್ಕಂಡ ಆದೇಶಾನುಸಾರ ಸಮಿತಿಯ ಅವಧಿ ದಿನಾಂಕ 24.7.2008ಕ್ಕೆ ಮುಕ್ತಾಯವಾಗುತ್ತಿತ್ತು. ಮೇಲೆ(4)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:15.7.2008ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯ ಕಲಾವಧಿಯನ್ನು ದಿನಾಂಕ:25.7.2008 ರಿಂದ ಜನವರಿ 2009ರ ಅಂತ್ಯದವರೆಗೆ ವಿಸ್ತರಿಸಿ ಆದೇಶಿಸಲಾಗಿರುತ್ತದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 28 ಭೂದಾಪು 2007 ದಿನಾಂಕ:22.8.2008ರಲ್ಲಿ ಶ್ರೀ ಜಿ.ಎಸ್. ನಾರಾಯಣಸ್ವಾಮಿ, ಐ.ಎ.ಎಸ್ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಬೆಂಗಳೂರು ಇವರನ್ನು ಶ್ರೀ ಹೆಚ್. ಶಶಿಧರ್ ಐ.ಎ.ಎಸ್., ಇವರು ಹೊಂದಿದ್ದ ಸದಸ್ಯ ಕಾರ್ಯದರ್ಶಿ ಹುದ್ದೆಗೆ ಹೆಚ್ಚುವರಿ ಪ್ರಭಾರದಲ್ಲಿಟ್ಟು ನೇಮಕ ಮಾಡಲಾಗಿರುತ್ತದೆ.

ತಾಲ್ಲೂಕು ಪುನರ್ ರಚನಾ ಸಮಿತಿಯು ಜನವರಿ 2009ರೊಳಗೆ ವರದಿ ನೀಡಬೇಕಿದೆ. ಇವರು ಹೊಸ ತಾಲ್ಲೂಕು ರಚನೆ ಬಗ್ಗೆ ಶಿಫಾರಸ್ಸು ಮಾಡಬೇಕಿದೆ. ಆದರೆ ಈಗಿನ ಆಡಳಿತ ಸುಧಾರಣೆ ಹಾಗೂ ಈಗಾಗಲೇ ಆಗಿರುವ ಬದಲಾವಣೆಗಳ ಹಿನ್ನೆಲೆಯಲ್ಲಿ ಭೂಮಿ, ನೆಮ್ಮದಿ, ಸರ್ವೆಇಲಾಖೆಯ ಸುಧಾರಣೆಗಳ ಹಿನ್ನಲೆಯಲ್ಲಿ ಇವುಗಳಿಂದ ಆಡಳಿತದ ಮೇಲೆ ಉಂಟಾಗಿರುವ ಪ್ರಭಾವಗಳನ್ನು ಸಹ ಇವರಿಗೆ ಅಧ್ಯಯನ ನಡೆಸಲು ಮತ್ತು ಹೊಸ ತಾಲ್ಲೂಕು ರಚನೆಗೆ ಅಡ್ಡಿ ಇರುವಲ್ಲಿ ಆಡಳಿತ ಸುಧಾರಣೆಗೆ ವಿಶೇಷ ತಹಶೀಲ್ದಾರರ ನೇಮಕ, ಅವರಿಗೆ ಸರಿಯಾದ ಅಧಿಕಾರ ಹಂಚಿಕೆ, ಹೊಸ ಉಪವಿಭಾಗಗಳ ರಚನೆ ಮುಂತಾದವುಗಳ ಬಗ್ಗೆ ಅಧ್ಯಯನ ನಡೆಸಲೂ ಇವರಿಗೆ ಅಧಿಕಾರ ನೀಡಿ ವರದಿ ಪಡೆಯುವುದು ಸೂಕ್ತವಿದೆ. ಈ ಕಾರಣದಿಂದ ಸಮಿತಿಯ ಅವಧಿಯನ್ನು ಅಗತ್ಯತೆ ಆಧರಿಸಿ ವಿಸ್ತರಿಸುವ ಬಗ್ಗೆ ಪರಿಶೀಲಿಸಿದ್ದು ಈ ಬಗ್ಗೆ ಇನ್ನೂ ನಾಲ್ಕು ತಿಂಗಳ ಅವಧಿಯವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 28 ಭೂದಾಪು 2007, ಬೆಂಗಳೂರು, ದಿನಾಂಕ:12ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ತಾಲ್ಲೂಕು ಪುನರ್ ರಚನಾ ಸಮಿತಿಯ ಕಾಲಾವಧಿಯನ್ನು ದಿ:1.2.2009 ರಿಂದ ಮೇ 2009ರ ಅಂತ್ಯದವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 331

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,ಕಂದಾಯ ಇಲಾಖೆ (ಭೂಮಾಪನ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಗೆ ಕಾರ್ಯದರ್ಶಿಗಳ ಹುದ್ದೆಯನ್ನು ಪೂರಕ ಸಿಬ್ಬಂದಿಯೊಡನೆ ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ:ಡಿಪಿಎಆರ್ 379 ಎಸ್ಎಎಸ್ 2008 ದಿನಾಂಕ:6.10.2008

2) ಅರೆ ಸರ್ಕಾರಿ ಪತ್ರ ಸಂಖ್ಯೆ:ಕಸಂವಾ 01 ಕಾ 2008 ದಿನಾಂಕ:16.10.2008, ಸರ್ಕಾರದ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ ಅವರಿಂದ

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ:6.10.2008 ರ ಅಧಿಸೂಚನೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಗೆ ಕಾರ್ಯದರ್ಶಿಯವರನ್ನು ನೇಮಕ ಮಾಡಲಾಗಿದೆ. ದಿನಾಂಕ:13.10.2008 ರಂದು ಸದರಿ ಹುದ್ದೆಯ ಕಾರ್ಯಭಾರ ವಹಿಸಿಕೊಂಡ ಕಾರ್ಯದರ್ಶಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ:16.10.2008ರ ಪತ್ರದಲ್ಲಿ ಅವರಿಗೆ ಅವರ ಹುದ್ದೆಯನ್ನು ಅವರ ಆಪ್ತ ಶಾಖೆಯಲ್ಲಿ ಪೂರಕ ಹುದ್ದೆಗಳೊಡನೆ ಅವರು ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಸೃಜಿಸಲು ಕೋರಿದ್ದಾರೆ, ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 830 ಸಆಸೇ 2008, ಬೆಂಗಳೂರು, ದಿನಾಂಕ:7ನೇ ನವೆಂಬರ್ 2008**

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯಲ್ಲಿ ಕಾರ್ಯದರ್ಶಿಗಳ ಒಂದು ಹುದ್ದೆಯನ್ನು ವೇತನ ಶ್ರೇಣಿ ರೂ. 18400–22400 ರಲ್ಲಿ ದಿನಾಂಕ:13.10.2008 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಡನೆ ಸೃಜಿಸಿ ಮುಂದುವರೆಸಲಾಗಿದೆ.

| ಕ್ರ.ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ ಗ್ರೇಟ್–2 | 01 ಹುದ್ದೆ |
| 2 | ಆಪ್ತ ಸಹಾಯಕರು (ಶೀಘ್ರಲಿಪಿಗಾರರು) | 02 ಹುದ್ದೆಗಳು |

| | | |
|---|---|---|
| 3 | ಕಿರಿಯ ಸಹಾಯಕ | 01 ಹುದ್ದೆ |
| 4 | ವಾಹನ ಚಾಲಕ | 01 ಹುದ್ದೆ |
| 5 | ಜಮೇದಾರ್ | 02 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ:5.11.2008ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 2258 ವೆಚ್ಚ–5 2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1557

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಪ್ರಸುತ್ತ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಧಾರವಾಡ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ

**ಸರ್ಕಾರಿ ಆದೇಶ ಸಂ:ಸಿಆಸುಇ 70 ಕಇವಿ 2008, ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್ 2008**

ಶ್ರೀ ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರು ಪ್ರಸುತ್ತ ಧಾರವಾಡ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದು ಹಿಂದೆ ಉಪ ವಿಭಾಗಾಧಿಕಾರಿಗಳು ಮತ್ತು ಅಧ್ಯಕ್ಷರು ಭೂ ನ್ಯಾಯ ಮಂಡಳಿ ಧಾರವಾಡ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸಂ:ಕೆ.ಎಲ್ ಆರ್:ದುರ್ಗದಕೇರಿ:ಡಿ.ಎಸ್.ಆರ್. 865 ದಿ:25.6.07ರ ನಡವಳಿಯಲ್ಲಿ 3892 ಎಕರೆ ಕೃಷಿ ಜಮೀನನ್ನು ಕೃಷಿಗೆ ಯೋಗ್ಯವಲ್ಲವೆಂದು ಆದೇಶ ಹೊರಡಿಸಿ ತೀವ್ರತರವಾದ ಕರ್ತವ್ಯಲೋಪ ಎಸಗಿರುವುದು ಕಂಡುಬಂದಿರುವುದರಿಂದಲೂ.

ಈ ಸಂಬಂಧ ಶ್ರೀ ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರು ಪ್ರಸುತ್ತ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಧಾರವಾಡ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ಅವಶ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ.

ಆದುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1Xಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರು ಪ್ರಸುತ್ತ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಧಾರವಾಡ ಇವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಮೋಹನ್ ಕುಮಾರ್ ಸಾಸನೂರು, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1556

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಶಿಕ್ಷಣ ಸಚಿವಾಲಯ

**ವಿಷಯ:** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಗೆ ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಸಂಬಂಧಿಸಿದಂತೆ ಹೆಣ್ಣು ಮಕ್ಕಳ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳ ಪರೀಕ್ಷಾ ಶುಲ್ಕ ಮರುಪಾವತಿಯ ಬಾಕಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ನಿರ್ದೇಶಕರ ಪತ್ರದ ಸಂಖ್ಯೆ:ಬಿ6/ಮ.ಶು.ಬಾ/15/ 2007–08, ದಿನಾಂಕ:13.3.2008.

**ಪ್ರಸ್ತಾವನೆ:**

1. ಮೇಲೆ ಓದಲಾದ ತಮ್ಮ ಪತ್ರದಲ್ಲಿ ಪರೀಕ್ಷಾ ಮಂಡಳಿಯ ನಿರ್ದೇಶಕರು 2004–05ನೇ ಸಾಲಿನಿಂದ 2007–08ನೇ ಸಾಲಿನವರೆಗೆ ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಸೇರಿದ ವಿದ್ಯಾಥಿಗಳು ಹಾಗೂ ಹೆಣ್ಣು ಮಕ್ಕಳ ಎಸ್.ಎಸ್.ಎಲ್.ಸಿ ಪರೀಕ್ಷಾ ಶುಲ್ಕ ಮರುಪಾವತಿಗೆ ಸಂಬಂಧಿಸಿದಂತೆ ಒಟ್ಟು ರೂ. 561.34 ಲಕ್ಷಗಳ ಬಾಕಿ ಇದ್ದು ಈ ಅನುದಾನವನ್ನು ಪರೀಕ್ಷಾ ಮಂಡಳಿಗೆ ಬಿಡುಗಡೆ ಮಾಡಲು ಕೋರಿದ್ದರು. ನಿರ್ದೇಶಕರು ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರ ದಯವಿಟ್ಟು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 164 ಯೊಯೋಕ 2007, ಬೆಂಗಳೂರು, ದಿನಾಂಕ:13ನೇ ಜನವರಿ 2009**
**[ಇಡಿ 05 ಸ್ವೀಮರ (ಯುನಿಕ್) 2009, ದಿನಾಂಕ:13–1–2009]**

2008–09ನೇ ಸಾಲಿಗೆ ಆಯವ್ಯಯ ಲೆಕ್ಕ ಶಿರ್ಷಿಕೆ 2202–02–800–1–05–101 (ಯೋಜನೇತರ) ಅಡಿಯಲ್ಲಿ ನಿಗದಿಯಾಗಿರುವ ಅನುದಾನದಲ್ಲಿಯೇ ರೂ. 280.00 ಲಕ್ಷ (ರೂಪಾಯಿ ಎರಡು ಕೋಟಿ ಎಂಭತ್ತು ಲಕ್ಷಗಳು ಮಾತ್ರ)ಗಳನ್ನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ಹಾಗೂ ಬಾಲಕಿಯರ ಪ್ರಥಮ ಬಾರಿಗೆ ನೀಡಬೇಕಾದ ಎಸ್.ಎಸ್.ಎಲ್.ಸಿ ಪರೀಕ್ಷಾ ಶುಲ್ಕದ ಮರುಪಾವತಿಗಾಗಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಗೆ ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಮಂಜೂರಾತಿ ನೀಡಿದೆ. ಇನ್ನು ಮುಂದೆ ಪರೀಕ್ಷಾ ಮಂಡಳಿಯ ಬಾಕಿಯ ಪ್ರಸ್ತಾಪವನ್ನು ಸಲ್ಲಿಸಬಾರದೆಂದೂ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1243 ವೆಚ್ಚ–8/2008, ದಿನಾಂಕ:9.1.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 351 **ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ , ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

**ಉನ್ನತ ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಇಡಿ 25 ಯುಕೆವಿ 2007, ಬೆಂಗಳೂರು, ದಿನಾಂಕ:16ನೇ ಜನವರಿ 2009**

**ವಿಷಯ:** 2007–08ನೇ ಶೈಕ್ಷಣಿಕ ಸಾಲಿನಿಂದ ಭಟ್ಕಳ್‌ದ ಭಟ್ಕಳ್ ಎಜುಕೇಷನ್ ಟ್ರಸ್ಟ್‌ನ ಸ್ನಾತಕೋತ್ತರ ಶೀಕ್ಷಣ ಅಧ್ಯಯನ ವಿಭಾಗದ ಹೊಸ ಎಂ.ಇಡಿ. ಕೋರ್ಸಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ/

**ಉಲ್ಲೇಖ:** 1. ಇದೇ ಸಮ ಸಂಖ್ಯೆಯ ಪತ್ರ ದಿನಾಂಕ:7.1.2009
2. ತಮ್ಮ ಪತ್ರ ಸಂಖ್ಯೆ: KU/CDC/Affln/2009–10 ದಿ:9.1.2009

ಉಲ್ಲೇಖಿತ (1)ರ ಸರ್ಕಾರಿ ಪತ್ರದಲ್ಲಿ ಎಲ್ಲೆಲ್ಲಿ "ಎಂ.ಇಡಿ ಕೋರ್ಸಿಗೆ 2007–08ನೇ ಶೈಕ್ಷಿಣಿ ಸಾಲಿನಿಂದ ಅನ್ವಯವಾಗುವಂತೆ 25 (ಇಪ್ಪತ್ತೈದು) ವಿದ್ಯಾರ್ಥಿ ಪ್ರಮಾಣ" ಎಂದು ನಮೂದಿಸಲಾಗಿದೆಯೊ ಅಲ್ಲಲ್ಲಿ "ಎಂ.ಇಡಿ ಕೋರ್ಸಿಗೆ 2007–08ನೇ ಶೈಕ್ಷಣಿಕ ಸಾಲಿಗೆ 40 (ನಲವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಹಾಗೂ 2008–09ನೇ ಸಾಲಿನಿಂದ ಅನ್ವಯವಾಗುವಂತೆ 25 (ಇಪ್ಪತ್ತೈದು) ವಿದ್ಯಾರ್ಥಿ ಪ್ರಮಾಣ" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 349 **ಬಿ.ಎಸ್. ಜಾಪಾಲಿ**

ಸರ್ಕಾರದ ಉಪ ಕಾರ್ಯದರ್ಶಿ ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ:ಸಿಆಸುಇ 211 ಸೇಇವಿ 2007, ಬೆಂಗಳೂರು, ದಿನಾಂಕ:15ನೇ ಜನವರಿ 2009**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 211 ಸೇಇವಿ 2007, ದಿನಾಂಕ:27.11.2008ರಲ್ಲಿನ ಆದೇಶ ಭಾಗದ 1ನೇ ಕಂಡಿಕೆಯ 6ನೇ ಸಾಲಿನಲ್ಲಿರುವ ಮಂಡನಾಧಿಕಾರಿಯ ಹೆಸರನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ) ಎಂದು ಹಾಗೂ ಕಂಡಿಕೆ 2ನ್ನು ಈ ಕೆಳಕಂಡಂತೆ ದಿನಾಂಕ:27–11–2008ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"ವಿಚಾರಣಾಧಿಕಾರಿಗಳು ಈ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 22 ಸೇಇವಿ 2007 ದಿನಾಂಕ:11.4.2008ರಲ್ಲಿ ನಿಗಧಿಪಡಿಸಿರುವ ರೂ. 8.000–00 (ರೂಪಾಯಿ ಎಂಟು ಸಾವಿರಗಳು ಮಾತ್ರ)ಗಳ ಗೌರವಧನ ಹಾಗೂ ರೂ. 1,500 (ರೂಪಾಯಿ ಒಂದು ಸಾವಿರದ ಐದುನೂರು ಮಾತ್ರ)ಗಳ ವಾಹನ ಭತ್ಯೆಗಳನ್ನು ಪಡೆಯುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 345 **ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 5 ಹೆಚ್‌ಹೆಚ್‌ಎಲ್ 2008, ಬೆಂಗಳೂರು, ದಿನಾಂಕ:20ನೇ ಡಿಸೆಂಬರ್ 2008**

2009ನೇ ಸಾಲಿಗೆ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ ಅಡಿಯಲ್ಲಿ ಘೋಷಿಸಿದ ರಜೆಗಳ ಅಧಿಸೂಚನೆ–II ಸಂಖ್ಯೆ ಸಿಆಸುಇ 5 ಹೆಚ್‌ಹೆಚ್‌ಎಲ್ 2008 ದಿನಾಂಕ:2.12.2008ರ ಟಿಪ್ಪಣಿ 2ರಲ್ಲಿ "ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಜೂನ್ 30 ಮತ್ತು ಡಿಸೆಂಬರ್ 31 ವಾರ್ಷಿಕ ಮತ್ತು ಅರ್ಧ ವಾರ್ಷಿಕ ಲೆಕ್ಕ ಪತ್ರ ಮುಕ್ತಾಯದ ದಿನಗಳಾಗಿರುತ್ತದೆ" ಎಂಬುದರ ಬದಲಾಗಿ ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಜುಲೈ 1 ಲೆಕ್ಕ ಪತ್ರ ಮುಕ್ತಾಯ ದಿನವಾಗಿರುತ್ತದೆ. ಡಿಸೆಂಬರ್ 31 ರಂದು ಕಾರ್ಯನಿರ್ವಹಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 346

**ಕೆ.ವಿ. ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ವಿಷಯ:** ಶ್ರೀ ಜಿ. ಗುರುಪ್ರಸಾದ್ ಮುಖ್ಯ ಇಂಜಿನಿಯರ್, ಇವರ ಅಮಾನತ್ತನ್ನು ರದ್ದು ಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸೇಇಮು 2008, ಬೆಂಗಳೂರು, ದಿನಾಂಕ:16ನೇ ಜನವರಿ 2009**

ಶ್ರೀ ಜಿ. ಗುರುಪ್ರಸಾದ್ ಮುಖ್ಯ ಇಂಜಿನಿಯರ್ ಅವರನ್ನು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 14 ಸೇಇಮು 2008 ದಿನಾಂಕ:18.10.2008ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಜಿ. ಗುರುಪ್ರಸಾದ್ ಮುಖ್ಯ ಇಂಜಿನಿಯರ್ ಅವರ ಅಮಾನತ್ತನ್ನು ರದ್ದು ಪಡಿಸಿ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 (5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಿ. ಗುರುಪ್ರಸಾದ್, ಮುಖ್ಯ ಇಂಜಿನಿಯರ್ ಅವರ ವಿರುದ್ಧ ನೆಡೆಯುತ್ತಿರುವ ಲೋಕಾಯುಕ್ತ ತನಿಖೆಯನ್ನು ಕಾಯ್ದಿಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಜಿ. ಗುರುಪ್ರಸಾದ್ ಮುಖ್ಯ ಇಂಜಿನಿಯರ್ ಅವರಿಗೆ ಸೂಕ್ತ ಹುದ್ದೆಯೊಂದನ್ನು ನೀಡಲು ಸಧ್ಯದಲ್ಲೇ ಕ್ರಮಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 344

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಪಿ.ವೈ. ರಾಜೇಂದ್ರಕುಮಾರ್ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ (ಈಗ ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 6 ಇಮುವಿ 2008, ದಿನಾಂಕ:31.3.2008
2. ಶ್ರೀ ಪಿ.ವೈ. ರಾಜೇಂದ್ರಕುಮಾರ್ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ:26.8.2008
3. ಶಿಕ್ಷಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಇಡಿ 60 ಡಿಜಿಓ 06 ದಿನಾಂಕ:10.9.2008

**ಪ್ರಸ್ತಾವನೆ:**

ಶ್ರೀ ಪಿ.ವೈ. ರಾಜೇಂದ್ರಕುಮಾರ್, ನಿವೃತ್ತ ನಿರ್ದೇಶಕರು, ಇವರು ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇಲ್ಲಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಗಣಕಯಂತ್ರಗಳ ಖರೀದಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯಲೋಪ ಹಾಗೂ ಹಣ ದುರುಪಯೋಗ ಎಸಗಿರುವ ಮತ್ತು ಅಧಿಕಾರ ದುರುಪಯೋಗಪಡಿಸಿಕೊಂಡಿರುವ ಒಟ್ಟು 7 ಆರೋಪಗಳಿಗಾಗಿ ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11–ಎ ರ ಅನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ:31.3.2008ರ ನೋಟೀಸ್‌ನೊಂದಿಗೆ ಆರೋಪಣಾ ಪಟ್ಟಿಗಳನ್ನು ಜಾರಿಗೊಳಿಸಲಾಗಿತ್ತು.

ಸದರಿ ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:26.8.2008ರ ಮನವಿಯಲ್ಲಿ ತಮ್ಮ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಅವರ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಹಾಗೂ ಶಿಕ್ಷಣ ಇಲಾಖೆಯ ಮೇಲೆ (3)ರಲ್ಲಿ ಓದಲಾದ ದಿನಾಂಕ:10.9.08ರ ಅನಧಿಕೃತ ಟಿಪ್ಪಣಿಯಲ್ಲಿ ಈ ಪ್ರಕರಣದ ಬಗ್ಗೆ ಸಲ್ಲಿಸಲಾದ ಸತ್ಯಾಪನಾ ವರದಿಯನ್ನು ಹಾಗೂ ಆರೋಪಿತರು ಪ್ರತಿರಕ್ಷಣಾ ಹೇಳಿಕೆಯಲ್ಲಿನ ವಿವರಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಸದರಿಯವರ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬರುತ್ತಿಲ್ಲವಾದ್ದರಿಂದ ಅವರ ವಿರುದ್ಧ ಮಾಡಲಾದ ಆರೋಪಗಳಲ್ಲಿನ

ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 6 ಇಮುವಿ 2008, ಬೆಂಗಳೂರು ದಿನಾಂಕ:17ನೇ ಜನವರಿ 2009**

ಶ್ರೀ ಪಿ.ವೈ. ರಾಜೇಂದ್ರಕುಮಾರ್, ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ (ಈಗ ನಿವೃತ್ತ) ಇವರ ವಿರುದ್ಧದ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ಸುಬ್ಬಾರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ)ರ ಅನ್ವಯ ಶ್ರೀ ಎನ್.ಎಸ್. ನಾಗೇಶ್, ಉಪ ನಿರ್ದೇಶಕರು, ನಗರ ಕೇಂದ್ರ ಗ್ರಂಥಾಲಯ, ಜಯನಗರ, ಬೆಂಗಳೂರು ಇವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ಮಂಡಿಸಲು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 22 ಸೇಇವಿ 07 ದಿನಾಂಕ:11.4.2008 ರಲ್ಲಿ ನಿಗಧಿಪಡಿಸಿರುವ ಗೌರವಧನ ಹಾಗೂ ವಾಹನ ಭತ್ಯೆಗಳನ್ನು ಪಡೆಯುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಅವರು ಕ್ರಮ ಕೈಗೊಳ್ಳುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 342

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಗಳೊಂದಿಗೆ ಮುಂದುವರಿಸುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 561 ಸಅಸೇ 2007 ದಿನಾಂಕ:11.12.2007

2. ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಟಿಪ್ಪಣಿ ಸಂಖ್ಯೆ:ಆನಾಸ 98 ಪ್ರಕಾ/2008 ದಿನಾಂಕ:25.11.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶ ದಿನಾಂಕ:11.12.2007ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.1.2008 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು. ಸದರಿ ಅವಧಿಯು ದಿನಾಂಕ:31.12.2008 ರಂದು ಕೊನೆಗೊಳ್ಳುವುದರಿಂದ ಈ ಹುದ್ದೆಯನ್ನು ಮತ್ತೊಂದು ವರ್ಷ ಅವಧಿಗೆ ಮುಂದುವರಿಸುವಂತೆ ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ:25.11.2008ರ ಟಿಪ್ಪಣಿಯಲ್ಲಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯು ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 39 ಸಅಸೇ 2009, ಬೆಂಗಳೂರು, ದಿನಾಂಕ:21ನೇ ಜನವರಿ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.1.2009 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.7.1996ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 338

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 713 ಸಅನೀ 07 ದಿನಾಂಕ:4.1.2008

2. ಕಂದಾಯ ಇಲಾಖೆಯ ಕಡತ ಸಂಖ್ಯೆ:ಕಂಇ 7 ವಿಕೋಅ 2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:4.1.2008ರ ಸರ್ಕಾರಿ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ಹುದ್ದೆಗಳನ್ನು ದಿ:31.12.2008 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು.

| ಕ್ರ.ಸಂ | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 1 (ಒಂದು) |
| 2 | ಹಿರಿಯ ಸಹಾಯಕ | 1 (ಒಂದು) |
| 3 | ಸಹಾಯಕ | 1 (ಒಂದು) |
| 4 | ಕಿರಿಯ ಸಹಾಯಕ | 1 (ಒಂದು) |
| 5 | ಬೆರಳಚ್ಚುಗಾರರು | 1 (ಒಂದು) |
| 6 | ದಲಾಯತ್ | 1 (ಒಂದು) |
| 7 | ಚಾಲಕ | 1 (ಒಂದು) |
| | ಒಟ್ಟು | 7 (ಏಳು) |

ಮೇಲೆ (2)ರಲ್ಲಿ ಓದಲಾದ ಕಂದಾಯ ಇಲಾಖೆಯ ಕಡತದಲ್ಲಿ ಮೇಲ್ಕಂಡ ಏಳು ಹುದ್ದೆಗಳನ್ನು ದಿ:1.1.2009 ರಿಂದ ಮತ್ತೆ ಒಂದು ವರ್ಷದ ಅವಧಿಯವರೆಗೆ ಮುಂದುವರಿಸುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 38 ಸಅಸೇ 2009, ಬೆಂಗಳೂರು, ದಿನಾಂಕ:21ನೇ ಜನವರಿ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಮೇಲ್ಕಂಡ ಏಳು ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:1.1.2009 ರಿಂದ ಜಾರಿಗೆ ಬರುವಂತೆ ದಿನಾಂಕ:31.12.2009 ರವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ, 96, ದಿನಾಂಕ:10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುದಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 337 **ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಟೆಲಿಮೆಟ್ರಿಕ್ ಮಳೆ ಮಾಪನ ಉಪಕರಣಗಳನ್ನು ಖರೀದಿಸಿ ಸ್ಥಾಪಿಸುವ ಬಗ್ಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಕಂದಾಯ ಇಲಾಖಾ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ:7/11/2007 ರಂದು ನಡೆದ ಸಭೆಯ ನಡವಳಿಗಳು

2. ಕಾರ್ಯದರ್ಶಿಗಳು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ: ITD/502/SEC/07 ದಿನಾಂಕ:27/12/2007.

3. ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ನಿರ್ದೇಶಕರ KSNDMC/TRG/HOBLI/25/2008-09/264 ದಿನಾಂಕ:21.8.2008ರ ಪತ್ರ

**ಪ್ರಸ್ತಾವನೆ:**

ದಿನಾಂಕ 7.11.2007ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ರಾಜ್ಯದಲ್ಲಿ ಮೊದಲ ಹಂತವಾಗಿ 600 ಹೋಬಳಿ ಕೇಂದ್ರಗಳಲ್ಲಿ ತಲಾ ಒಂದರಂತೆ 600 ಟೆಲಿಮೆಟ್ರಿಕ್ ಮಳೆ ಮಾಪನ ಯಂತ್ರಗಳನ್ನು ಸ್ಥಾಪಿಸಲು ನಿರ್ಧರಿಸಲಾಯಿತು ಹಾಗೂ ಈ ಯಂತ್ರಗಳನ್ನು ಸ್ಥಾಪಿಸಲು ಕಂದಾಯ ಇಲಾಖೆಯಿಂದ ಕೆಎಸ್‌ಎನ್‌ಡಿಎಂಸಿ (ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರ) ಗೆ ಹಣ ಬಿಡುಗಡೆ ಮಾಡಲು ನಿರ್ಧರಿಸಲಾಯಿತು. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಇಲಾಖೆ ಜೈವಿಕ ತಂತ್ರಜಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ ಇವರಿಗೆ ರೂ. 375 ಲಕ್ಷ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

KSNDMC ಯ (ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರದ) ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ರಾಜ್ಯದಲ್ಲಿ ಹೋಬಳಿ ಮಟ್ಟದಲ್ಲಿ 600 ಟೆಲಿಮೆಟ್ರಿಕ್ ಮಳೆ ಮಾಪನ ಉಪಕರಣಗಳನ್ನು ಸ್ಥಾಪಿಸಲಾಗಿದ್ದು ಈ ಬಾಬ್ತು ರೂ. 375 ಲಕ್ಷ ಹಣವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ ಇವರಿಗೆ 600 ಟೆಲಿಮೆಟ್ರಿಕ್ ಯಂತ್ರಗಳ್ನನು ಸ್ಥಾಪಿಸಿದ ಬಾಬ್ತು ರೂ. 2,60,84,855/–ಗಳ ಅನುದಾನ ಬಿಡುಗಡೆ ಮಾಡಲು ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಕಂಇ 186 ಟಿಎನ್‌ಆರ್ 2005, ಬೆಂಗಳೂರು, ದಿನಾಂಕ:25ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ 600 ಹೋಬಳಿ ಗಳಲ್ಲಿ ಟೆಲಿಮೆಟ್ರಿಕ್ ಮಳೆ ಮಾಪನ ಉಪಕರಣಗಳನ್ನು ಖರೀದಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ,. ಬೆಂಗಳೂರು ಇವರಿಗೆ ರೂ. 2,60,.84,855/– (ರೂ.ಗಳು ಎರಡು ಕೋಟಿ ಅರವತ್ತು ಲಕ್ಷದ ಎಂಬತ್ನಾಲ್ಕು ಸಾವಿರದ ಎಂಟನೂರ ಐವತ್ತೈದು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2053–00–800–8–02–059" ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ಭರಿಸುವುದು.

ಈ ಮೊತ್ತದಲ್ಲಿ 600 ಟೆಲಿಮೆಟ್ರಿಕ್ ಮಳೆ ಮಾಪನಾ ಯಂತ್ರಗಳನ್ನು ಸರಬರಾಜು ಮಾಡುವುದು, ಅವುಗಳ ಸ್ಥಾಪನೆ, ಯಶಸ್ವಿ ಕಾರ್ಯಾರಂಭ ಮತ್ತು 5 ವರ್ಷಗಳ ನಿರ್ವಹಣಾ ವೆಚ್ಚವೂ ಸೇರಿದೆ. ಟೆಂಡರನಲ್ಲಿರುವ ಎಲ್ಲ ಷರತ್ತುಗಳನ್ನು ಪಾಲಿಸುವುದು.

ಟೆಲಿಮೆಟ್ರಿಕ್ ಮಳೆ ಮಾಪನ ಉಪಕರಣವನ್ನು Specification ನಂತೆ ಸರಬರಾಜು ಮಾಡುವುದು, ಸ್ಥಾಪಿಸುವುದು ಮತ್ತು ನಿರ್ವಹಣಾ ಕಾರ್ಯ ತೃಪ್ತಿಕರವಾಗಿ ಇರುವ ಬಗ್ಗೆ ಖಚಿತ ಪಡಿಸಿಕೊಂಡ ನಂತರ ಮಾತ್ರ ಹಣ ಪಾವತಿಸುವುದು. ಹಣ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಆದೇಶ/ಸುತ್ತೋಲೆ/ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸುವುದು ಹಣ ವೆಚ್ಚ ಮಾಡಿದ ನಂತರ ಸರ್ಕಾರಕ್ಕೆ ವೆಚ್ಚದ ವಿವರಗಳೊಂದಿಗೆ ಉಪಯೋಗಿತ ಪತ್ರವನ್ನು ಸಲ್ಲಿಸುವುದು.

ಮೇಲಿನಂತೆ ಬಿಡುಗಡೆಯಾಗಿರುವ ಅನುದಾನವನ್ನು ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು ಇವರು ಪೇಯಿಸ್ ರಶೀದಿ ಬಿಲ್ಲು ತಯಾರಿಸಿ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ವಿಪತ್ತು ನಿರ್ವಹಣೆ, ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ಡ್ರಾ ಮಾಡಲು ಸೂಚಿಸಿದೆ.

Telematric ಮಳೆಮಾಪನ ಕೇಂದ್ರದಿಂದ ಬರುವಂತಹ ಮಾಹಿತಿಯನ್ನು ಈಗಾಗಲೇ ಅದೇ ಸ್ಥಳದಲ್ಲಿರುವ ಇತರೆ ಮಳೆ ಮಾಪನ ಕೇಂದ್ರದಿಂದ ಬರುವ ಮಾಹಿತಿಯೊಂದಿಗೆ ಹೋಲಿಸಿ ಸರಿಯಾಗಿರುವುದನ್ನು ಖಾತರಿಪಡಿಸಿಕೊಳ್ಳುವುದು ಹಾಗೂ ಈ ಬಗ್ಗೆ ಸರ್ಕಾರಕ್ಕೆ ಮಾಹಿತಿ ಒದಗಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 207/ವೆಚ್ಚ–7/2008 ದಿನಾಂಕ:14.8.2008ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1515

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ವಿಷಯ:** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಹುದ್ದೆಯನ್ನು ಕೆಳದರ್ಜೆಗಿಳಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1) ಇವರ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 379 ಎಸ್ ಎಎಸ್ 2008, ದಿನಾಂಕ:6.10.2008.

2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1) ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 454 ಸೆಆಸೆ 2008, ದಿನಾಂಕ:16.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಅಧಿಸೂಚನೆಯಲ್ಲಿ ಶ್ರೀ ಕೆ.ಆರ್. ನಿರಂಜನ, ಭಾ.ಆ.ಸೇ., ಜಿಲ್ಲಾಧಿಕಾರಿ, ಕೊಡಗು ಜಿಲ್ಲೆ, ಮಡಿಕೇರಿ ಇವರನ್ನು ಹಾಲಿ ಖಾಲಿ ಇದ್ದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಹುದ್ದೆಗೆ (ಕೆಳದರ್ಜೆಗಿಳಿಸಿ) ವರ್ಗಾಯಿಸಿ ಸ್ಥಳ ನಿಯುಕ್ತಿ ನೀಡಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಅನಧಿಕೃತ ಟಿಪ್ಪಣಿಯಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಹುದ್ದೆಯನ್ನು ಕೆಳದರ್ಜೆಗಿಳಿಸಿ ಆದೇಶವನ್ನು ಹೊರಡಿಸುವಂತೆ ಕೋರಲಾಗಿದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1) ಇವರ ಕೋರಿಕೆಯಂತೆ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಹುದ್ದೆಯನ್ನು ಅಧಿಸೂಚನೆ ಸಂಖ್ಯೆ:ಡಿಪಿಎಆರ್ 379 ಎಸ್ ಎಎಸ್ 2008, ದಿನಾಂಕ:6.10.2008 ರಿಂದ ಜಾರಿಗೆ ಬರುವಂತೆ ಕೆಳದರ್ಜೆಗಿಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 76 ಮುನೋಸೇ (1) 2008, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್ 2008**

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಹುದ್ದೆಯನ್ನು ಅಧಿಸೂಚನೆ ಸಂಖ್ಯೆ:ಡಿಪಿಎಆರ್ 379 ಎಸ್‌ಎಎಸ್ 2008, ದಿನಾಂಕ:6.10.2008 ರನ್ವಯ ಸೂಪರ್ ಟೈಂ ಸ್ಕೇಲ್‌ನಿಂದ ಸೀನಿಯರ್ ಸ್ಕೇಲ್ ಹುದ್ದೆಯನ್ನಾಗಿ ಅದೇ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆಳದರ್ಜೆಗಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 211

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)